ಕಾಯಕವೇ ಕೈಲಾಸ

# ಸಿದ್ಧಗಂಗಾ





ಸಂಪುಟ : ೫೪ ಜೂನ್ ೨೦೧೮ ಸಂಚಿಕೆ : ೦೬



ನೂತನ ಮುಖ್ಯಮಂತ್ರಿ ಸನ್ಮಾನ್ಯ ಶ್ರೀ ಹೆಚ್.ಡಿ. ಕುಮಾರಸ್ವಾಮಿಯವರು ಶ್ರೀಮಠಕ್ಕೆ ಭೇಟಿ ನೀಡಿ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ದರ್ಶನ ಮಾಡಿ ಆಶೀರ್ವಾದ ಪಡೆದರು.






ಮತದಾನದ ಹಕ್ಕು ಚಲಾಯಿಸುತ್ತಿರುವ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಹಾಗೂ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು.



## ಅಂತರಂಗ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
ಆವಾವ ಕಾಯಕವ ಮಾಡಿದರು ಬಸವೇಶ
ಆವಗಂ ಶರಣರನು ಸೇವಿಪೆನು ಬಸವೇಶ

# ಸಿದ್ಧಗಂಗಾ

ಸಂಪುಟ : ೫೪ ಜೂನ್ ೨೦೧೮ ಸಂಚಿಕೆ : ೦೬

ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು
ಸಂಸ್ಥಾಪಕ ಅಧ್ಯಕ್ಷರು

ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳು
ಉಪಾಧ್ಯಕ್ಷರು

ಸಂಪಾದಕರು :
ಹೆಚ್.ವಿ. ವೀರಭದ್ರಯ್ಯ
ಸಹ ಸಂಪಾದಕರು :
ಎಚ್.ಎಸ್. ಸಿದ್ಧಗಂಗಪ್ಪ

ಪತ್ರಿಕಾ ನಿರ್ವಹಣಾ ಸಮಿತಿ :
ಎಂ. ರೇಣುಕಾರಾಧ್ಯ
ಆರ್.ಎಸ್. ಮಲ್ಲೇಶಪ್ಪ
ಕೆ.ಬಿ. ಶಿವಶಂಕರಯ್ಯ

ಪ್ರಕಾಶನ :
ಹಳೆಯ ವಿದ್ಯಾರ್ಥಿಗಳ ಸಂಘ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪.

ಮುದ್ರಕರು :
ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್
ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ,
ತುಮಕೂರು-೫೭೨ ೧೦೪.

ವಿಳಾಸ :
"ಸಂಪಾದಕರು"
'ಸಿದ್ಧಗಂಗಾ' ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ-೫೭೨ ೧೦೪
ದೂ: ೦೮೧೬-೨೨೮೨೩೨೨.

## ಒಳಪುಟಗಳಲ್ಲಿ ..................



ಚಂದಾ ವಿವರ : ವಾರ್ಷಿಕ ಚಂದಾ ರೂ. 200/-
ಆಜೀವ ಸದಸ್ಯತ್ವ ರೂ. 1500/- ಬಿಡಿ ಪ್ರತಿ ರೂ. 20.00



## ಸಂಪಾದಕೀಯ........

# ನೂತನ ಸಮ್ಮಿಶ್ರ ಸರ್ಕಾರದ ಮುಂದಿರುವ ಸವಾಲುಗಳು

ವಿಧಾನಸಭೆಗೆ ಸಾರ್ವತ್ರಿಕ ಚುನಾವಣೆ ನಡೆದು ಕಾಂಗ್ರೆಸ್ ಮತ್ತು ಜನತಾದಳ ಸಮ್ಮಿಶ್ರ ಸರ್ಕಾರ ಅಸ್ತಿತ್ವಕ್ಕೆ ಬಂದು ನೂತನ ಮುಖ್ಯಮಂತ್ರಿಯಾಗಿ ಸನ್ಮಾನ್ಯ ಶ್ರೀ ಹೆಚ್. ಡಿ. ಕುಮಾರಸ್ವಾಮಿಯವರು, ಉಪ ಮುಖ್ಯಮಂತ್ರಿಗಳಾಗಿ ಸನ್ಮಾನ್ಯ ಡಾ. ಜಿ. ಪರಮೇಶ್ವರ ಅವರು ಹಾಗೂ ವಿರೋಧ ಪಕ್ಷದ ನಾಯಕರಾಗಿ ಆಯ್ಕೆಯಾದ ಸನ್ಮಾನ್ಯ ಶ್ರೀ ಬಿ.ಎಸ್. ಯಡಿಯೂರಪ್ಪನವರಿಗೆ ಹಾಗೂ ನೂತನ ಶಾಸಕರಿಗೆ ಸಿದ್ಧಗಂಗಾ ಹೃತ್ಪೂರ್ವಕವಾಗಿ ಅಭಿನಂದಿಸುತ್ತದೆ.

ನೂತನ ಸರ್ಕಾರದ ಮುಂದೆ ಅನೇಕ ಸವಾಲುಗಳಿವೆ. ಕಾವೇರಿ, ಮಹದಾಯಿ, ಎತ್ತಿನಹೊಳೆ ಯೋಜನೆ, ರೈತರ ಸಾಲ ಮನ್ನಾ, ಕೃಷಿ ಪಂಪ್‌ಸೆಟ್‌ಗಳಿಗೆ ದಿನಕ್ಕೆ ಕನಿಷ್ಟ ಎಂಟು ಗಂಟೆಗಳ ಕಾಲ ವಿದ್ಯುತ್ ಸರಬರಾಜು, ರೈತರು ಬೆಳೆದ ಬೆಳೆಗಳಿಗೆ ಬೆಂಬಲ ಬೆಲೆ, ಬೆಂಗಳೂರಿಗೆ ಶಾಶ್ವತ ಕುಡಿಯುವ ನೀರಿಗಾಗಿ ಮೇಕೆದಾಟುವಿನಲ್ಲಿ ಅಣೆಕಟ್ಟು ನಿರ್ಮಾಣ, ನಿರುದ್ಯೋಗ ಸಮಸ್ಯೆ, ಹಳ್ಳಿಗಳಿಗೆ ನಿರಂತರ ವಿದ್ಯುತ್ ಸಂಪರ್ಕ, ಯುವಕರಿಗೆ ಸ್ವಯಂ ಉದ್ಯೋಗಕ್ಕೆ ಆರ್ಥಿಕ ನೆರವು, ಜನಪದ ಕಲೆಗಳಿಗೆ ಪ್ರೋತ್ಸಾಹ, ಆಡಳಿತದ ಎಲ್ಲಾ ಹಂತಗಳಲ್ಲಿಯೂ ಸಂಪೂರ್ಣ ಕನ್ನಡದಲ್ಲಿಯೇ ಪತ್ರ ವ್ಯವಹಾರ, ಸರ್ಕಾರಿ ಶಾಲೆಗಳ ಅಭಿವೃದ್ಧಿ, ಗ್ರಾಮಗಳಿಗೆ ಶುದ್ಧ ಕುಡಿಯುವ ನೀರು ಪೂರೈಕೆ, ಗಡಿ ಸಮಸ್ಯೆ, ಸರ್ಕಾರಿ ನೌಕರರು ಹಾಗೂ ಅಂಗನವಾಡಿ ನೌಕರರ ನ್ಯಾಯ ಸಮ್ಮತ ಬೇಡಿಕೆಗಳು, ಹೀಗೆ ಹಲವಾರು ಜ್ವಲಂತ ಸಮಸ್ಯೆಗಳು, ನೂತನ ಸರ್ಕಾರದ ಮುಂದಿವೆ. ಇವೆಲ್ಲವನ್ನೂ ಹಂತ ಹಂತವಾಗಿ ಬಗೆಹರಿಸಿ ರಾಜ್ಯದ ಸರ್ವಾಂಗೀಣ ಅಭಿವೃದ್ಧಿ ಮಾಡುವ ಗುರುತರವಾದ ಜವಾಬ್ದಾರಿ ನೂತನ ಸರ್ಕಾರದ ಮೇಲಿದೆ. ಗ್ರಾಮೀಣ ಹಾಗೂ ನಗರ ಪ್ರದೇಶಗಳಲ್ಲಿ ನೈರ್ಮಲ್ಯ, ಪರಿಸರ ರಕ್ಷಣೆ ಮಾಡಲು ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಕಾರ್ಯೋನ್ಮುಖವಾಗಬೇಕಾಗಿದೆ.

ಜನ ಪ್ರತಿನಿಧಿಗಳು ಪಕ್ಷಭೇದ ಮರೆತು ತಮ್ಮ ತಮ್ಮ ಕ್ಷೇತ್ರಗಳಲ್ಲಿರುವ ಸಮಸ್ಯೆಗಳಿಗೆ ಸ್ಪಂದಿಸಿ ಅಭಿವೃದ್ಧಿಗೆ ಮುಂದಾಗಬೇಕಾಗಿದೆ. ನೂತನ ಸರ್ಕಾರ ಚುನಾವಣೆಗೆ ಮುನ್ನ ನೀಡಿದ ಭರವಸೆಗಳನ್ನು ಈಡೇರಿಸಲು ಪ್ರಾಮಾಣಿಕ ಪ್ರಯತ್ನ ಮಾಡಬೇಕಾಗಿದೆ. ನೂತನ ಸರ್ಕಾರ ಎಲ್ಲರನ್ನು ವಿಶ್ವಾಸಕ್ಕೆ ತೆಗೆದುಕೊಂಡು ತಮಗೆ ದೊರೆತ ಅಧಿಕಾರ ಜನರ ಸೇವೆ ಮಾಡಲು ದೊರೆತ ಸದಾವಕಾಶ ಎಂದು ಭಾವಿಸಿ ಮಹಾತ್ಮ ಗಾಂಧೀಜಿಯವರ ರಾಮರಾಜ್ಯದ ಕನಸನ್ನು ಸಾಕಾರಗೊಳಿಸುವುದರ ಮೂಲಕ ಸರ್ಕಾರ ಉತ್ತಮ ಆಡಳಿತ ನೀಡುವಂತಾಗಲಿ ಎಂದು ಸಿದ್ಧಗಂಗಾ ಶುಭ ಹಾರೈಸುತ್ತದೆ.

* * *

'ಜೋಳಿಗೆ ಸಂತ' ಎಂದೇ ಪ್ರಸಿದ್ಧರಾಗಿದ್ದ ಇಳಕಲ್ ಪೂಜ್ಯ ಶ್ರೀ ಮಹಾಂತ ಶಿವಯೋಗಿಗಳು ಬಸವಣ್ಣನವರ ತತ್ತ್ವಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಂಡು, ಮೂಢನಂಬಿಕೆ, ಕಂದಾಚಾರ, ದುಶ್ಚಟಗಳ ವಿರುದ್ಧ ಅವಿರತ ಹೋರಾಟ ನಡೆಸಿದರು. ಪೂಜ್ಯರು ಸ್ಪಷ್ಟನುಡಿ, ಅಪಾರ ಪಾಂಡಿತ್ಯ ಹಾಗೂ ಸಂಗೀತ ಜ್ಞಾನದಿಂದಾಗಿ ಉತ್ತಮ ವಾಗ್ಮಿಗಳಾಗಿದ್ದರು. ಸಿದ್ಧಗಂಗಾ ಮಠ ಹಾಗೂ ಪರಮಪೂಜ್ಯ ಶ್ರೀಗಳವರೊಂದಿಗೆ ಅವಿನಾಭಾವ ಸಂಬಂಧವನ್ನಿಟ್ಟುಕೊಂಡಿದ್ದರು. ಅವರು ಮೇ ೧೯ ರಂದು ಲಿಂಗೈಕ್ಯರಾದುದು ಸಮಾಜಕ್ಕೆ ಭರಿಸಲಾಗದ ನಷ್ಟ, ಸಿದ್ಧಗಂಗಾ ಗುರುಪರಂಪರೆ ಅವರ ಆತ್ಮಕ್ಕೆ ಚಿರಶಾಂತಿಯನ್ನು ನೀಡಲಿ ಎಂದು ಸಿದ್ಧಗಂಗಾ ಪ್ರಾರ್ಥಿಸುತ್ತದೆ.

ಪ್ರೊ. ಹೆಚ್.ವಿ. ವೀರಭದ್ರಯ್ಯ
ಸಂಪಾದಕರು





## ಶ್ರೀವಾಣಿ

# ಶರಣ ಸಂಸ್ಕೃತಿ

'ಕದಳಿಯೆಂಬುದು ತನು, ಕದಳಿಯೆಂಬುದು ಮನ, ಕದಳಿಯೆಂಬುದು ವಿಷಯಗಳು. ಕದಳಿಯೆಂಬುದು ಘೋರಾರಣ್ಯ, ಕದಳಿಯೆಂಬುದು ಗೆದ್ದು ತವೆ ಬದುಕಿ ಬಂದು, ಕದಳಿಯ ಬನದಲ್ಲಿ ಭವಹರನ ಕಂಡೆನು. ಭವಗೆದ್ದು ಬಂದ ಮಗಳೆಂದು ಕರಣದಿಂ ತೆಗೆದಪ್ಪಿ ಬಿಗಿಯಪ್ಪಿದರೆ ಚೆನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿ ಅಡಗಿದೆನು"

ಮಹಿಳೆಯನ್ನು 'ಪ್ರತ್ಯಕ್ಷ ಕಪಿಲಸಿದ್ಧಮಲ್ಲಿಕಾರ್ಜುನ' ಎಂದು ಕಂಡದ್ದು ಶರಣ ಸಂಸ್ಕೃತಿ. ಆತ್ಮವಿಶ್ವಾಸವನ್ನು ಮಹಿಳೆಯಲ್ಲಿ ತುಂಬಿ ಆತ್ಮವಿಕಾಸಕ್ಕೆ ಅವಕಾಶ ಕಲ್ಪಿಸಿ ಕಾಯಕದ ಎಚ್ಚರಿಕೆಯನ್ನು ಪುರುಷ ಪುಣ್ಯವರ್ಗಕ್ಕೆ ತಂದುಕೊಡುವಂತಹ ಮಾರ್ಗದರ್ಶನಕೆ ಶಕ್ತಿಯಾಗುವಂತೆ ರೂಪಿಸಿ ಅಲ್ಲಿ ಇಲ್ಲಿ ಎಂಬ ಉಭಯ ಸಂಶಯವ ಬಿಡಿಸುವ ಮುಕ್ತಿಮಂದಿರ ಲಿಂಗಾನುಭವಿಗಳನ್ನಾಗಿಸಿದ ಶರಣ ಸಂಸ್ಕೃತಿಯ ಭದ್ರಚೇತನಗಳ ಆದರ್ಶವನ್ನು, ಧ್ಯೇಯ ಧೋರಣೆಗಳನ್ನು ಇಂದಿನ ಮಹಿಳೆಯರು ಅನುಸರಿಸುವ ಸಮಾಜಶಕ್ತಿ. ಅದು ಸಂವರ್ಧನ ಶೀಲವಾಗುವುದರಲ್ಲಿ ಸಂಶಯವಿಲ್ಲ.

ಕದಳಿ ಪವಿತ್ರ ಶಬ್ದಜ್ಯೋತಿ. ಆಧ್ಯಾತ್ಮ ಪ್ರದೀಪ. ರಸವನ. ಮಂಗಳಮುಕ್ತಿಧಾಮ. ಅಕ್ಕಮಹಾದೇವಿಯ ಶುಭನಾಮದೊಡನೆ ಬೆರಸಿ ಬೇರಾಗದಂತೆ ಶರಣ ಸಿದ್ಧಾಂತದಲ್ಲಿ ತೊಳಗಿ ಬೆಳಗುತ್ತಿರುವ ತತ್ತ್ವತೋಟ. ಅಲ್ಲಿ ಉರಿಯುವ ಕರ್ಪೂರದ ಬೆಳಕು. ಇಹಪರ ಸಮನ್ವಯದ ಸುಂದರ ಸುಗಂಧ. ತನುಮನಗಳ ಭಾವಲಿಂಗದ ನೋಟ. ಶ್ರೀಶೈಲ ಗಿರಿ ಶ್ರೇಣಿಯಲ್ಲಿ ಅಡಗಿರುವ ಗುಪ್ತಮುಕ್ತಿ ಶರಣ ಗವಿಸಿರಿ. ಅಲ್ಲಮಪ್ರಭುಗಳು ಮತ್ತು ಅಕ್ಕಮಹಾದೇವಿಯರು ಬಯಲಾದ ಪವಿತ್ರಕ್ಷೇತ್ರ.

* * *

ನಮ್ಮ ಪ್ರಕಾರ ಸಮಗ್ರ ಸುಖಜೀವನಕ್ಕೆ ಅಧ್ಯಾತ್ಮವೇ ತಳಹದಿ. ಹಲವು ಸಂಸ್ಕೃತಿ, ಭಾಷೆ, ಧರ್ಮ, ವರ್ಣ, ಜನಾಂಗಗಳನ್ನು ಒಳಗೊಂಡ ಈ ವಿಶ್ವ ಒಂದು ಕುಟುಂಬ ಇದ್ದಂತೆ. ಇಲ್ಲಿ ಸುಖ, ನೆಮ್ಮದಿ, ಶಾಂತಿ ಸ್ಥಾಪಿಸುವಲ್ಲಿ ಭರತ ಖಂಡದ ಪಾತ್ರ ಮತ್ತು ಪಾಲು ಮಹತ್ವವಾದುದು. ಶ್ರೀ ಅರವಿಂದ ಮಹರ್ಷಿಗಳ, ಶ್ರೀ ವಿವೇಕಾನಂದರ, ಶಿವಶರಣರ ಬೋಧನೆಯ ಸಾರ ಇದೇ ಆಗಿದೆ. ಇದನ್ನು ಸಾಧಿಸುವುದು ನಮ್ಮೆಲ್ಲರ ಕರ್ತವ್ಯವಾಗಿದೆ.

## ವಚನ-ತ್ರಿವಿಧಿ

### ಶ್ರೀ ಸಿದ್ಧಲಿಂಗೇಶ್ವರ ವಚನ



**ಮಾರುತನ ಮುಖದ ಮಾನಿನಿ**
**ಆರುಮಂದಿಯ ಹಡದಳು ನೋಡಾ,**
**ಅವರು ಮೂರು ಲೋಕವ ಕೊಲುವ ವೈರಿಗಳು**
**ಅವರ ಜೈಸುವರನಾರನು ಕಾಣೆ,**
**ಅರಿಗಳಾರನು ಕೊಂದಾತ ತ್ರಿಜಗದೊಡೆಯನು ಕಾಣಾ**
**ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೇ.**

ಮಾರುತನ ಮುಖದ ಮಾನಿನಿ-ಪ್ರಾಣವಾಯುವೆ ವದನವಾಗುಳ್ಳ ಮಾಯಾಶಕ್ತಿಯು, ಆರು ಮಂದಿಯ ಹಡದಳು ನೋಡಾ, ಆರುಮಂದಿಯ-ಕಾಮಾದಿ ಅರಿಷಡ್ವರ್ಗಂಗಳೆಂಬ ಪುತ್ರರುಗಳನು, ಹಡದಳು-ಬೆಸನಾದಳು, ನೋಡಾ-ಕಂಡಾ, ಅವರು ಮೂರು ಲೋಕವ : ಅವರು-ಅರಿಷಡ್ವರ್ಗಂಗಳು, ಮೂರು ಲೋಕವ-ತ್ರಯಿ ಲೋಕವನು, ಕೊಲುವ-ಸಂಹರಿಸುವ, ವೈರಿಗಳು-ಶತ್ರುಗಳು, ಅವರ ಜೈಸುವರನಾರನು ಕಾಣೆ : ಅವರ – ಕಾಮಾದಿ ಅರಿಷಡ್ವರ್ಗಂಗಳ, ಜಯಿಸುವರೆ – ಗೆಲುವಂಥವರುಗಳನು, ಆರನು ಕಾಣೆ-ಒಬ್ಬರನು ಕಂಡುದಿಲ್ಲವು, ಅರಿಗಳಾರನು-ಕಾಮಾದಿ ಅರಿಷಡ್ವರ್ಗಗಳನು, ಕೊಂದಾತ-ಸಂಹರಿಸಿದಾತ, ತ್ರೈಜಡೊಡೆಯನು-ಮೂರು ಲೋಕಂಗಳಿಗೆ ಕರ್ತನು, ಕಾಣಾ-ಕಂಡಾ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು- ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ(ರಿ.) ಎಡೆಯೂರು- ಕುಣಿಗಲ್ ತಾಲ್ಲೂಕು, ತುಮಕೂರು ಜಿಲ್ಲೆ)

### ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ದಿಕ್ಕೆಟ್ಟ ಬದುಕಿಗೆ ಚುಕ್ಕಾಣಿ ನೀನಾದೆ
ಹೊಕ್ಕು ನೋಡಿದೆ ಒಳಬದುಕ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ವೀರಶೈವಧರ್ಮ ವಿಶ್ವಧರ್ಮವೆಂದೆ
ಶರಣರು ನಡೆನುಡಿದ ಪಥವೆಂದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಜಗದೊಳಗಿರುವುದು ಎರಡೆ ಕುಲತಾನೆಂದೆ
ದುಡಿದುಣ್ಣುವರದೊಂದವಲಂಬಿ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭವಿಭಕ್ತ ಎಂಬುದು ಗುಣಕರ್ಮದಿ ಕಳಿವುದು
ಶಿವಸೇವೆ ಶಿವಶೀಲ ಒರೆಗಲ್ಲು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಮಕ್ರೋಧ ಮೋಹ ಮದ ಲೋಭ ಮತ್ಸರ
ತಮಸಿನ ತವರೂರು ಭವಿಬಾಳು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪ್ರೇಮ ಪ್ರೀತಿ ಒಲವು ಸ್ನೇಹ ಶ್ರದ್ಧೆಗಳಿಹವು
ಸತ್ಯಶುದ್ಧ ದುಡಿಮೆ ನಿಜದರಿವು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅತ್ತ ಮಕ್ಕಳ ಕೈಗೆ ತುತ್ತನ್ನ ನೀ ನೀಡು
ಎತ್ತಲೋದೈವವೆಂದರಸದಿರು । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಕಾಲಹರಣಕ್ಕಿಂತ ದ್ರೋಹ ಮತ್ತೊಂದಿಲ್ಲ
ಕಾಲಸಂಪಾದನೆಯೆ ಗುರಿದೈವ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಧ್ಯಯನ ಬಿಡದಿರು ಅಧ್ಯಾಪನ ನಡೆದಿರಲಿ
ಶುದ್ಧ ಚಿಂತನದಿ ಮನವಿರಲಿ । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಮಯ ಸಂಪ್ರದಾಯ ಸಂಸ್ಕೃತಿಯ ಅಂಗಗಳು
ಸಂಸ್ಕಾರ ಒಳಮುಖದ ಕೆನೆಹಾಲು । ತಾನೆಂದ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಪ್ರೊ. ಹೆಚ್.ವಿ. ವೀರಭದ್ರಯ್ಯ



## ಚಿಂತನ

# ಆತ್ಮಾನುಭವ

– ಶ್ರೀ ಸಿದ್ಧೇಶ್ವರ ಸ್ವಾಮಿಗಳು *

ಈ ಜಗತ್ತಿನಲ್ಲಿ ಯಾವ ವಸ್ತುವೂ ಸ್ವತಂತ್ರವಾಗಿಲ್ಲ. ಹಲವಾರು ಸಂಬಂಧಗಳ ಜಾಲದಲ್ಲಿ ಅದು ಬಂಧಿತ ವಾಗಿದೆ. ಈ ಸಂಬಂಧಗಳನ್ನು ಮುಖ್ಯವಾಗಿ ಎರಡು ರೀತಿಯಲ್ಲಿ ವಿಂಗಡಿಸಬಹುದು. ಒಂದು ದೇಶ ವಿಷಯಕ ಸಂಬಂಧ, ಇನ್ನೊಂದು ಕಾಲವಿಷಯಕಸಂಬಂಧ, ಎಡ-ಬಲ, ಹಿಂದೆ-ಮುಂದೆ, ಮೇಲೆ-ಕೆಳಗೆ, ಸುತ್ತ-ಮುತ್ತ ಮೊದಲಾದವು ದೇಶ ವಿಷಯಕ ಸಂಬಂಧಗಳು. ನಾಳೆ- ನಾಡಿದ್ದು, ಮೊದಲಾದವು ಕಾಲವಿಷಯಕ ಸಂಬಂಧಗಳು. ಪ್ರಪಂಚದಲ್ಲಿ ಯಾವ ವಸ್ತುವೂ ಈ ದೇಶ-ಕಾಲಗಳ ಸಂಬಂಧ ಮೀರಲಾರದು. ಸೂರ್ಯನಾಗಲಿ, ಚಂದ್ರನಾಗಲಿ ಈ ನಿಯಮಕ್ಕೆ ಹೊರತಲ್ಲ.

ಮನುಷ್ಯನಿಗೂ ಅಸಂಖ್ಯ ಸಂಬಂಧಗಳು. ಅವುಗಳಲ್ಲಿ ಎರಡು ವಿಧ. ಬಹಿರಂಗದಲ್ಲಿ ದೇಶ-ಕಾಲ-ವಸ್ತುಗಳ ಸಂಬಂಧ. ಅಂತರಂಗದಲ್ಲಿ ನಾನು-ನನ್ನದು, ಶ್ರೇಷ್ಠ-ಕನಿಷ್ಠ ಎಂಬಿತ್ಯಾದಿ ಭಾವಗತ ಸಂಬಂಧಗಳು. ಬಹಿರಂಗದ ದೇಶ -ಕಾಲ-ವಸ್ತುಗಳ ಸಂಬಂಧವನ್ನು ಹೇಗಾದರೂ ಬಿಡಿಸಿ ಕೊಳ್ಳಬಹುದು. ಭಾವಗತ ಸಂಬಂಧಗಳ ಜಾಲಗಳಿಂದ ಪಾರಾಗುವುದು ಕಷ್ಟಸಾಧ್ಯ.

ಸಂಸಾರಿಗಳಿಗೆ ಹೊಲ-ಮನೆ, ಮಡದಿ-ಮಕ್ಕಳು ಎಂಬಿತ್ಯಾದಿ ಸಂಬಂಧಗಳ ಜಾಲ. ಸನ್ಯಾಸಿಗಳಿಗೆ ಮಠ-ಮಂದಿರ, ಗುರು-ಶಿಷ್ಯರು ಎಂಬಿತ್ಯಾದಿ ಸಂಬಂಧಗಳ ಬೇಲಿ. ದೈಹಿಕ ಮಾನಸಿಕ ಸಂಬಂಧಗಳ ಈ ಜಾಲವೇ ಸಂಸಾರ. ಅದನ್ನು ಮೀರಿದವರು ಅತ್ಯಂತ ಅಪರೂಪ. ಮೇಲು-ಕೀಳು ಎಂಬ ಜಾತಿಯ ಮಾತುಗಳನ್ನು ನಾವು ಆಡುತ್ತೇವೆ. 'ಜಾತಿ' ಎಂಬ ವಸ್ತುವೇ ಈ ಜಗತ್ತಿನಲ್ಲಿ ಇಲ್ಲ. ಅದೊಂದು ಅಜ್ಞಾನದಿಂದ ಉಂಟಾದ ಭಾವಗ್ಗತ ಭ್ರಮಾತ್ಮಕ ಕಲ್ಪನೆ!

ದೇಶ ಸಂಬಂಧದಿಂದ ನಾವು ಪೂರ್ವದವರು, ಅವರು ಪಶ್ಚಿಮದವರು, ನಾವು ಸ್ವದೇಶಿಯರು ಅವರು ವಿದೇಶೀಯರು. ಭಾಷೆಯ ಸಂಬಂಧದಿಂದ ಕನ್ನಡಿಗ, ಮರಾಠಿಗ, ಆಂಗ್ಲ ಎಂಬಿತ್ಯಾದಿ ಭೇದಭಾವ. ದೇಹದೃಷ್ಟಿ ಯಿಂದ ಸ್ತ್ರೀ-ಪುರುಷ, ಸಿರಿಯ ಸಂಬಂಧದಿಂದ ಬಡವ- ಬಲ್ಲಿದ. ಸಂಬಂಧಜನಿತವಾದ ಈ ಭೇದಗಳ ಜಾಲವೇ ಪ್ರಪಂಚ. ಈ ಬಾಹ್ಯಾಭ್ಯಂತರ ಸಕಲ ಸಂಬಂಧಗಳಿಂದ ರಹಿತವಾದುದೇ ಆತ್ಮ. ಅದು ಅಸಂಬಂಧಿ, ಅಸಂಗ! ನಮ್ಮ ಮನಸ್ಸು ದೇಶ-ಕಾಲ-ವಸ್ತು ಹಾಗೂ ಭಾವಗತ ಸಂಬಂಧಗಳೆಲ್ಲ ಕಳೆದುಕೊಂಡು ಪರಿಶುದ್ಧವಾಗ ಬೇಕು. ಆಗ ನಮಗೆ ಅಸಂಗ, ಅಸಂಬಂಧಿತವಾದ ಪವಿತ್ರ ಆತ್ಮ ದರ್ಶನ! ಅದರಿಂದ ಬದುಕಿನಲ್ಲಿ ಸ್ಥಿರ ಶಾಂತಿ, ಸಮಾಧಾನಗಳು ನೆಲೆಸುವುವು. ಅದು ಜೀವನ ಯೋಗ!

ಮಾನವ ಜೀವನದಲ್ಲಿ 'ಪತಿ-ಪತ್ನಿ, 'ಸತಿ-ಪತಿ' ಎಂಬುದು ಒಂದು ಸಂಬಂಧ. ಇರುವ ಹೆಣ್ಣು-ಗಂಡನ್ನು ಕರೆತಂದು 'ಸತಿ-ಪತಿ'ಗಳು ಎಂದು ಹಿರಿಯರು ಹೇಳಿದರು. ಕೂಡಲೇ ಈ ಮೊದಲೂ ಎಂದೂ ಇಲ್ಲದ ಪ್ರಾಪಂಚಿಕ ಹೊಸ ಸಂಬಂಧಕ್ಕೆ ಅವರು ಒಳಗಾದರು. ಏಳೇಳು ಜನ್ಮದಲ್ಲಿ ಪತಿಯು ತನ್ನ ಸತಿಗೆ ತಾನೇ ಒಡೆಯನೆಂದು ಭಾವಿಸಿದ. ಸತಿಯಾದರೂ ಪತಿಯ ಮನೆತನವಕ್ಕೆಲ್ಲ ತಾನೇ ಒಡತಿ ಎಂದು ಬಾವಿಸಿದಳು. ಕೆಲವೇ ದಿನಗಳಲ್ಲಿ ಸತಿ-ಪತಿಗಳಲ್ಲಿ ವಿರಸವಾಯಿತು. ಭ್ರಮೆ ನಿರಸನಗೊಂಡಿತು. ಬಾಹ್ಯಬಂಧನವಳಿದರೂ ಭಾವಬಂಧನದಿಂದ ಬಳಲಿದರು. ಹಕ್ಕಿ-ಪಕ್ಷಿ ಗಳಂತೆ ಸಹಜ-ಸ್ವತಂತ್ರ ಜೀವನ ಸಾಗಿಸಿ ಸಂತಸದಿಂದ ಇರುವುದನ್ನು ಮರೆತರು.

ಅಂಕಿ-ಸಂಖ್ಯೆಗಳಲ್ಲಿಯೂ ನಾವು ಪವಿತ್ರ-ಅಪವಿತ್ರ ಸಂಬಂಧ ಕಲ್ಪಿಸಿದೆವು. ಭಾರತೀಯರು '೩' ಅಪವಿತ್ರ ವೆಂದರು. ಆಂಗ್ಲರು '೧೩'ನ್ನು ಒಂದೊಂದು ಸೇರಿಯೇ ಮೂರಾಗಿದೆ. ಹದಿಮೂರಾಗಿದೆ. ಯಾವ ಅಂಕಿಯೂ ಸ್ವತಂತ್ರವಾಗಿಲ್ಲ. ಅಂಕಿ-ಸಂಖ್ಯೆಗಳಲ್ಲಿ ವಿಚಿತ್ರ ಸಂಬಂಧ ಕಲ್ಪಿಸಿ ಸುಮ್ಮನೆ ಮನುಷ್ಯ ಬಳಲಿದ.

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ಈ ಬಾಹ್ಯಾಭ್ಯಂತರ ಸಂಬಂಧಗಳಿಂದ ಮನುಷ್ಯ ಜೀವನದ ನಿಜಸೌಖ್ಯವನ್ನೇ ಕಳೆದುಕೊಂಡ. ಒಂದು ತಂಬಾಕು, ಬೀಡಿ, ಅಡಿಕೆಯಂಥ ಸಣ್ಣ ವಸ್ತುವನ್ನು ಬಿಟ್ಟು ಬದುಕುವುದೇ ಸಾಧ್ಯವಿಲ್ಲವೆಂದು ಭಾವಿಸಿದ. ಕೆಲವರಿಗೆ ನಡೆದಾಡುವಾಗ ಬಡಿಗೆ ಅಥವಾ ಛತ್ರಿಯನ್ನು ಹಿಡಿಯುವ ಅಭ್ಯಾಸವಿರುತ್ತದೆ. ಹಾಗಲ್ಲದೆ ನಡೆದಾಡುವುದೇ ಸಾಧ್ಯವಿಲ್ಲ ಎನಿಸುವಷ್ಟು ಅವುಗಳ ಸಂಬಂಧ ಚಟವಾಗಿ, ವ್ಯಾಧಿಯಾಗಿ ಪರಿಣಮಿಸಿರುವುದನ್ನು ಕಾಣುತ್ತೇವೆ.

ಪಂಚಪಾಂಡವರಲ್ಲಿ ಧರ್ಮರಾಜನಿಗೆ ಲೆತ್ತದಾಟದ ಸಂಬಂಧ ವ್ಯಸನವೆನಿಸುವಷ್ಟು ಬೆಳೆದಿತ್ತು. ಇವನ ಈ ದೌರ್ಬಲ್ಯವನ್ನು ಚೆನ್ನಾಗಿ ಬಲ್ಲ ಕೌರವ ದೊರೆ ದುರ್ಯೋಧನನು ಲೆತ್ತದಾಟಕ್ಕೆ ಆಮಂತ್ರಣ ಕಳುಹಿಸಿದ. ಆಮಂತ್ರಣ ತಂದ ವಿದುರ ಧರ್ಮರಾಜನಿಗೆ ಕಿವಿಮಾತು ಹೇಳಿದ. 'ಲೆತ್ತದಾಟ ಸರಿಯಲ್ಲ' ಎಂದು ಎಚ್ಚರಿಸಿದ. ಆದರೆ ಅದು ಧರ್ಮರಾಜನಿಗೆ ಕೇಳಿಸಲಿಲ್ಲ. ಮೈಮರೆತು ಲೆತ್ತದಾಟ ಆಡಿದ. ಸೋತು ಎಲ್ಲವನ್ನೂ ಕಳೆದುಕೊಂಡ. ಈ ಲೆತ್ತದಾಟದ ವಿಚಿತ್ರ ಸಂಬಂಧವೇ ಮುಂದೆ ಮಹಾಭಾರತದ ಘನಘೋರ ಕದನಕ್ಕೆ ಬೀಜವಾಯಿತು!

ಇದರರ್ಥ ಮನುಷ್ಯನಿಗೆ ದೇಶ, ಕಾಲ, ವಸ್ತು, ವ್ಯಕ್ತಿಯ ಸಂಬಂಧಗಳೇ ಇರಬಾರದು ಎಂದಲ್ಲ. ಆದರೆ ಈ ಸಂಬಂಧವೇ 'ಒಂದು ಬಂಧನವಾಗಿರಬಾರದು, ವ್ಯಸನ ವಾಗಬಾರದು, ವ್ಯಾಮೋಹಕ್ಕೆ ಕಾರಣವಾಗ ಬಾರದು. ಇಂಥ ಒಂದು ವಸ್ತು ಅಥವಾ ವ್ಯಕ್ತಿ ಇಲ್ಲದೆ ನಾನು ಬದುಕುವುದೇ ಇಲ್ಲ' ಎನ್ನುವಂತಾಗಬಾರದು. ಜೀವನ ನಿರ್ವಹಣೆಗಾಗಿ ಪ್ರಾಪಂಚಿಕ ಅನುಕೂಲತೆಗಾಗಿ ಮನುಷ್ಯನು ಸಿರಿ-ಸಂಪದ, ಸ್ಥಾನ-ಮಾನ, ಬಂಧು-ಬಳಗ ಎಲ್ಲವನ್ನೂ ಗಳಿಸಿರಬೇಕು. ಆದರೆ ಅವುಗಳೇ ಜೀವನದ ಪರಮಾರ್ಥವಾಗಬಾರದು. ಅವುಗಳಿದ್ದರೂ, ಇಲ್ಲದಿದ್ದರೂ ನಾವು ನೆಮ್ಮದಿಯಿಂದ ಬದುಕಲು ಸಾಧ್ಯ ಎಂಬುದನ್ನು ತಿಳಿದಿರಬೇಕು.

ಸಂತರು, ಶರಣರು ಇದೇ ಜಗತ್ತಿನಲ್ಲಿ ಎಂಥ ಸಂತಸ ದಿಂದ ಬದುಕಿದರು! ಈ ಜಗತ್ತಿನ ಪ್ರಾಪಂಚಿಕವಾದ ಯಾವ ಸಂಬಂಧವೂ ಅವರನ್ನು ಬಂಧಿಸಲಿಲ್ಲ. ಅಲ್ಲಮಪ್ರಭು ದೇವರು ಬಸವಕಲ್ಯಾಣದ ಶೂನ್ಯಸಿಂಹಾಸನದ ಪ್ರಥಮ ಪೀಠಾಧಿಪತಿಗಳಾದರು. ಶರಣರೆಲ್ಲರೂ ಅವರನ್ನು ಸಾಕಾರ ಗೊಂಡ ಗುಹೇಶ್ವರನೆಂದೇ ಭಾವಿಸಿದರು. ಅಲ್ಲಮರು ಮಾತ್ರ ಆ ಸಿಂಹಾಸನಕ್ಕೆ ಎಂದೂ ಅಂಟಿಕೊಳ್ಳಲಿಲ್ಲ. ಒಂದು ದಿನ ಇಳಿದು ಹೋದರೆ ಹನ್ನೆರಡು ವರುಷ ಆತ್ತ ಮರಳಿ ನೋಡಲಿಲ್ಲ! ಸರ್ವಸಂಬಂಧಗಳಿಲ್ಲದ ಅಸಂಬಂಧಿತ, ಅಸಂಗ ಆತ್ಮನ ಧ್ಯಾನದಲ್ಲಿಯೇ ಸದಾ ಮಗ್ನರಾಗಿದ್ದರು. ಅದು ಸಂತರ, ಶರಣರ, ಜೀವನ್ಮುಕ್ತರ ಬದುಕಿನ ರೀತಿ!

ಲಾವೋತ್ಸೆ ಚೀನಾ ದೇಶದ ಮಹಾನ್ ಸಂತ. ಒಂದು ದಿನ ಆ ದೇಶದ ಮಹಾರಾಜನೇ ಬಂದು 'ಸಂತರೇ, ನಾನು ನಿಮ್ಮ ಶಿಷ್ಯನಾಗಲು ಬಯಸುತ್ತೇನೆ!' ಎಂದು ಹೇಳಿದ. ಲಾವೋತ್ಸೆ ಹೇಳಿದ 'ನೀನು ನನ್ನ ಶಿಷ್ಯನಾಗಬಹುದು. ನಾನು ಮಾತ್ರ ನಿನ್ನ ಗುರು ಆಗಲಾರೆ' ರಾಜನೇ ಶಿಷ್ಯನಾಗಲು ಬಂದರೂ ಲಾವೋತ್ಸೆ ವ್ಯಾಮೋಹಕ್ಕೆ ಒಳಗಾಗಲಿಲ್ಲ. ಗುರು-ಶಿಷ್ಯ ಸಂಬಂಧ ಬಯಸಲಿಲ್ಲ. ಸೂಜಿಯು ಚಿನ್ನದ್ದಾದರೇನು, ಕಬ್ಬಿಣದ್ದಾದರೇನು? ಅದು ನೋಯಿಸದೆ ಬಿಡುವುದಿಲ್ಲ. ಹಾಗೆಯೇ ಪ್ರಾಪಂಚಿಕ ಸಂಬಂಧ ಶ್ರೇಷ್ಠವಾದರೇನು; ಕನಿಷ್ಠವಾದರೇನು? ಅದು ನಮ್ಮನ್ನು ಬಂಧಿಸದೆ ಬಿಡುವುದಿಲ್ಲ. ಅಂತೆಯೇ ಮಹಾತ್ಮರು ಲೌಕಿಕ, ಅಲೌಕಿಕ ಸಂಗದಲ್ಲಿ ಇದ್ದೂ ಇಲ್ಲದಂತಿದ್ದರು. ಅಸಂಗ ಆತ್ಮನ ಧ್ಯಾನದಲ್ಲಿ ಸದಾ ನೆಲೆಸಿದ್ದರು! ಅದು ಜೀವನ್ಮುಕ್ತಿ!

ಪ್ರಪಂಚದ ಸಂಗ, ಪ್ರೇಮ ಮನುಷ್ಯನಿಗೆ ಇರಬಾರದು ಎಂದಲ್ಲ. ಆದರೂ ಅದು ಅತಿಯಾಗಿ ಬಂಧಿಸಬಾರದಷ್ಟೆ. ರಸ್ತೆಯಲ್ಲಿ ನಡೆದಾಡುವಾಗ ನಾವು ಪಾದರಕ್ಷೆಗಳನ್ನು ಬಳಸ ಬಹುದು. ಆದರೆ ಅವು ಬಹಳ ಬೆಲೆಯುಳ್ಳವು, ಉಪಯುಕ್ತ ವಾದವುಗಳೆಂದು ಮನೆಯೊಳಗೆ ಎಲ್ಲಿಯವರೆಗೆ ತರುವುದು? ಬದುಕುವುದಕ್ಕೆ ಎಷ್ಟು ಬೇಕೋ ಅಷ್ಟು ಸಿರಿ- ಸಂಪದ, ವಿದ್ಯಾ-ಬುದ್ಧಿ ನಮ್ಮಲ್ಲಿ ಇರಬೇಕು. ಆದರೆ ಅವು ನಮ್ಮ ಹೃದಯವನ್ನು ಸೇರಬಾರದು. ನಮ್ಮ ನೆಮ್ಮದಿಯನ್ನು ಕೆಡಿಸಬಾರದು. ದಿನವಿಡೀ ಪ್ರಾಪಂಚಿಕ ವ್ಯವಹಾರಗಳನ್ನು ಶ್ರದ್ಧೆಯಿಂದ ಮಾಡಬೇಕು. ಸಂಜೆ ಮನೆಗೆ ಬರುತ್ತಲೇ ಎಲ್ಲವನ್ನು ಮರೆತು-ಮಲಗಬೇಕು. ಇಲ್ಲವಾದರೆ ನಿದ್ರೆ ಬಾರದೆ ಮಾತ್ರೆ ನುಂಗುವುದು ವಿದೇಶಿಯರಂತೆ ಕುರಿತಲೆ ಯನೆಣಿಸುವುದು ಮಾಡಬೇಕಾದೀತು! ಈ ಪ್ರಾಪಂಚಿಕ ವ್ಯಾಮೋಹ ಹೆಚ್ಚಾದರೆ ಏನೇನು ಅಪಾಯವಾದೀತೆಂದು ಹೇಳಲಾಗದು!

ಒಮ್ಮೆ ಇಬ್ಬರು ಸೋದರರು ವ್ಯಾಪಾರಕ್ಕೆಂದು ಹೊರಟರು. ಅವರ ವಾಹನ ಎರಡು ಕತ್ತೆಗಳು. ಕೆಲವು ದಿನ ವ್ಯಾಪಾರ ಮಾಡಿ ಅಪಾರ ಸಂಪತ್ತಿನೊಂದಿಗೆ ತಮ್ಮ ಗ್ರಾಮದತ್ತ ನಡೆದರು. ಸಂಪತ್ತನ್ನೆಲ್ಲಾ ತಮ್ಮ ತಮ್ಮ ಕತ್ತೆಗಳ



ಮೇಲೆ ಹೇರಿದ್ದರು. ಮಾರ್ಗಮಧ್ಯದಲ್ಲಿ ಆಯಾಸವಾಗಿ ಒಂದು ಮರದಡಿ ಮಲಗಿದರು. ಗಂಟುಗಳನ್ನು ಹತ್ತಿರದಲ್ಲಿ ಇಟ್ಟುಕೊಂಡಿದ್ದರು. ಕತ್ತೆಗಳು ಅಲ್ಲಿಯೇ ಮೇಯುತ್ತಲಿದ್ದವು. ಅಣ್ಣನಿಗೆ ಮೊದಲೇ ಎಚ್ಚರವಾಯಿತು. ತಮ್ಮನು ಇನ್ನೂ ಗಾಢ ನಿದ್ರೆಯಲ್ಲಿದ್ದ. ತಕ್ಷಣ ಅಣ್ಣನಿಗೆ ಏನೋ ಹೊಳೆಯಿತು. ತಮ್ಮನ ಗಂಟಿನಲ್ಲಿದ್ದ ಒಂದಿಷ್ಟು ಹಣವನ್ನು ಎತ್ತಿಕೊಳ್ಳಲು ತೊಡಗಿದ. ಅಷ್ಟರಲ್ಲಿ ತಮ್ಮನಿಗೆ ಎಚ್ಚರಿಕೆ ಯಾಯಿತು. ಅಣ್ಣನು ಸಂಪತ್ತು ಕದಿಯುತ್ತಿರುವುದನ್ನು ಕಂಡು ಕುಪಿತನಾದ. ಒಡಹುಟ್ಟಿದ ಅಣ್ಣ ತಮ್ಮರೆಂಬುದನ್ನು ಮರೆತು ಇಬ್ಬರೂ ಬಡಿದಾಡಿ ಅಸುನೀಗಿದರು. ಕತ್ತೆಗಳು ಮಾತ್ರ ನಿರ್ಲಿಪ್ತವಾಗಿ ಒಣಗಿದ ಹುಲ್ಲುಕಡ್ಡಿಗಳನ್ನು ಮೇಯುತ್ತಿದ್ದವು. ಮರದ ಮೇಲಿದ್ದ ಗಿಳಿಯು ಕತ್ತೆಗಳಿಗೆ ಕೇಳಿತು-'ನಿಮ್ಮ ಮಾಲೀಕರು ಹಣಕ್ಕಾಗಿ ಪರಸ್ಪರ ಬಡಿದಾಡಿ ಮಡಿದರೂ ನೀವು ನಿಶ್ಚಿಂತರಾಗಿರುವಿರಲ್ಲ ಹೇಗೆ?' ಕತ್ತೆಗಳು ಹೇಳಿದವು. 'ಹೇಗೂ ನಾವು ಬುದ್ಧಿ ಹೀನರಲ್ಲವೇ? ಅದಕ್ಕೆ ನಾವು ನಿಶ್ಚಿಂತರು! ಮನುಷ್ಯ ಬಹಳ ಬುದ್ಧಿವಂತ, ಆದ್ದರಿಂದ ಅವನು ಹಾಗೆ!'

'ಅಸಂಗಃ ಆತ್ಮಃ' ಎಂದರೆ ಆತ್ಮನ ದೇಶ, ಕಾಲ, ವಸ್ತು, ವ್ಯಕ್ತಿ, ಸಂಗ, ಸಂಬಂಧ ವಿರಹಿತನು! ನಾವಾದರೂ ನಮ್ಮ ಪ್ರಪಂಚದ ಸಕಲ ಸಂಬಂಧಗಳ ಮೋಹವನ್ನು ಬಿಡಬೇಕು. ಅದರಿಂದ ನಮ್ಮ ಹೃದಯ ಪರಿಶುದ್ಧ! ನಮಗೆ ಆತ್ಮಾನುಭವ, ಆತ್ಮ ಸಾಕ್ಷಾತ್ಕಾರ! ಆಗ ನಮ್ಮ ಬದುಕು ದಿವ್ಯ, ಭವ್ಯ! ಅದು ಜೀವನಯೋಗ! ಆತ್ಮಾನುಭವ !

## ಶ್ರೀವಾಣಿ

ಜ್ಞಾನಿಗಳ ದೃಷ್ಟಿಯಲ್ಲಿ ನಿದ್ರೆ, ಕಲಹ, ವ್ಯಸನಗಳಲ್ಲಿ ಕಳೆದ ವಯಸ್ಸು ಪರಿಗಣಿತವಲ್ಲ. ಬದುಕಿನಲ್ಲಿ ಸಾರ್ಥಕವಾಗಿ ಸಂದುದೇ ನಿಜವಾದ ವಯಸ್ಸು ಮತ್ತು ಆಯುಸ್ಸು.

* * *

ಹೆಣ್ಣು ಕುಟುಂಬದ ಕಣ್ಣು. ಅವಳು ಬುದ್ಧಿವಂತಳಾಗಿ ತನ್ನ ಮಕ್ಕಳನ್ನು ಸತ್ಪ್ರಜೆಗಳನ್ನಾಗಿ ಬೆಳೆಸಿದರೆ ಆ ಕುಟುಂಬ ಹಸನಾಗುತ್ತದೆ. ಹೀಗೆ ಒಂದೊಂದು ಕುಟುಂಬವೂ ಹಸನಾದರೆ ಸಮಾಜ ಹಸನಾಗುವುದು. ತನ್ಮೂಲಕ ರಾಷ್ಟ್ರವೂ ಹಸನಾದೀತು

## ಇಳಕಲ್ ಮಹಾಂತ ಶ್ರೀಗಳು ಲಿಂಗೈಕ್ಯ

ವ್ಯಸನ ಮುಕ್ತ ಸಮಾಜ ನಿರ್ಮಾಣಕ್ಕೆ ತಮ್ಮ ಬದುಕನ್ನೇ ಮೀಸಲಾಗಿಟ್ಟು ಕೊನೆತನಕ ಹೋರಾಟ ನಡೆಸಿದ ಪರಮಪೂಜ್ಯ ಇಳಕಲ್ ಮಹಾಂತ ಶಿವಯೋಗಿಗಳು ಮೇ ೧೮ ರಂದು ಲಿಂಗೈಕ್ಯರಾದರು. ಅವರಿಗೆ ೮೮ ವರ್ಷವಾಗಿತ್ತು.

'ಜೋಳಿಗೆಯ ಸಂತ' ಎಂದೇ ಪ್ರಸಿದ್ಧರಾಗಿದ್ದ ಪೂಜ್ಯ ಶ್ರೀಗಳವರು ದೇಶದ ಮೂಲೆ ಮೂಲೆ ತಿರುಗಿ ದುಶ್ಚಟಗಳ ನಿವಾರಣೆಗೆ ಅವಿರತವಾಗಿ ಹೋರಾಟ ನಡೆಸಿದ್ದರು. ಬಸವ ತತ್ತ್ವ ಆರಾಧಕರಾಗಿದ್ದು, ಬಸವಣ್ಣನವರ ಜೀವನ ಸಿದ್ಧಾಂತಗಳನ್ನು ಜೀವನದಲ್ಲಿ ಅಳವಡಿಸಿಕೊಂಡು, ಅಂತರಂಗ ಬಹಿರಂಗಗಳೆರಡನ್ನು ಶುದ್ಧವಾಗಿಟ್ಟುಕೊಂಡು ಬದುಕನ್ನು ನಡೆಸುವುದರ ಮೂಲಕ ಇತರೆ ಮಠಾಧೀಶರುಗಳಿಗೆ ಆದರ್ಶ ಪ್ರಾಯರಾಗಿದ್ದರು. ೫ ದಶಕಗಳ ಕಾಲ ಶರಣರ ಸಾಹಿತ್ಯ, ತತ್ತ್ವಾದರ್ಶಗಳನ್ನು ನಾಡಿನ ಮೂಲೆ ಮೂಲೆಗಳಿಗೆ ಪ್ರಸಾರ ಮಾಡಿದ ಶಿವಯೋಗಿಗಳು ಶ್ರೀಮಠದ ಬಗ್ಗೆ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಅಪಾರವಾದ ಭಕ್ತಿ, ಗೌರವವನ್ನಿಟ್ಟುಕೊಂಡಿದ್ದರು. ಶ್ರೀಮಠದಲ್ಲಿ ನಡೆದ ಅನೇಕ ಸಮಾರಂಭಗಳಲ್ಲಿ ಭಾಗವಹಿಸಿ ಶರಣ ಸಂದೇಶವನ್ನು ದಯಪಾಲಿಸಿದ್ದರು. ಅವರ ಅಗಲಿಕೆಯಿಂದ ಸಮಾಜಕ್ಕೆ ಭರಿಸಲಾಗದ ನಷ್ಟವಾಗಿದೆ ಎಂದು ಪರಮ ಪೂಜ್ಯರಾದ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು, ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಸಂತಾಪ ಸೂಚಿಸಿದ್ದಾರೆ. ಶ್ರೀ ಸಿದ್ಧಗಂಗಾ ಗುರುಪರಂಪರೆ ಪರಮ ಪೂಜ್ಯ ಶ್ರೀ ಶ್ರೀ ಮಹಾಂತ ಶಿವಯೋಗಿಗಳವರ ಆತ್ಮಕ್ಕೆ ಚಿರಶಾಂತಿಯನ್ನು ಕರುಣಿಸಲಿ ಎಂದು ಸಿದ್ಧಗಂಗಾ ಪ್ರಾರ್ಥಿಸುತ್ತದೆ.

(ಮುಂದಿನ ಸಂಚಿಕೆಯಲ್ಲಿ ಪೂಜ್ಯ ಇಳಕಲ್ ಶ್ರೀಗಳವರನ್ನು ಕುರಿತು ನುಡಿನಮನ ಪ್ರಕಟಿಸಲಾಗುವುದು. -ಸಂ.)

ನುಡಿನಮನ

# ವಾತ್ಸಲ್ಯಶ್ರೀ

– ಡಾ. ಎಂ.ಎನ್. ಚನ್ನಬಸಪ್ಪ *

ಅನೇಕ ಕಾರಣಗಳಿಂದಾಗಿ ಇಡೀ ದೇಶದಲ್ಲಿ ಅದ್ವಿತೀಯ ಎನಿಸಿದ ಶ್ರೀ ಸಿದ್ಧಗಂಗಾ ಕ್ಷೇತ್ರದಲ್ಲಿ ದೇಶದ ವಿವಿಧ ಭಾಗಗಳಿಗೆ ಹಾಗೂ ವಿವಿಧ ಪಂಥಗಳಿಗೆ ಸೇರಿದ ಒಂಭತ್ತು ಸಾವಿರಕ್ಕೂ ಹೆಚ್ಚು ವಿದ್ಯಾರ್ಥಿಗಳಿಗೆ ಉಚಿತ ಅಶನ ವಸತಿಗಳ ಏರ್ಪಾಡಿದೆ. ಪ್ರಪಂಚದಲ್ಲೇ ಅತ್ಯಂತ ಹೆಚ್ಚಿನ ವಿದ್ಯಾರ್ಥಿ ಸಂಖ್ಯೆಯುಳ್ಳ ಸಂಸ್ಕೃತ ಮಹಾವಿದ್ಯಾಲಯ ಇಲ್ಲಿದೆ. ಶ್ರೀಕ್ಷೇತ್ರಕ್ಕೆ ಪ್ರತಿನಿತ್ಯ ಬಂದು ಹೋಗುವ ಸಾವಿರಾರು ಯಾತ್ರಿಕರಿಗೆ ಜಾತಿ ಮತಗಳ ಭೇದವಿಲ್ಲದೆ ದಾಸೋಹ ವ್ಯವಸ್ಥೆ ಇದೆ. ಶ್ರೀಕ್ಷೇತ್ರದ ಆಶ್ರಯದಲ್ಲಿ ಪ್ರಾಥಮಿಕ, ಮಾಧ್ಯಮಿಕ ಹಾಗೂ ಪ್ರೌಢಶಾಲೆಗಳು, ಉಪಾಧ್ಯಾಯ ಶಿಕ್ಷಣ ಶಾಲೆಗಳು, ಎಂಜಿನಿಯರಿಂಗ್ ಕಾಲೇಜು ಮುಂತಾದ ಅನೇಕ ವಿದ್ಯಾ ಸಂಸ್ಥೆಗಳು ನಡೆಯುತ್ತಿವೆ. ಇಷ್ಟೆಲ್ಲಾ ಗುರುತರ ಜವಾಬ್ದಾರಿಗಳ ನಿರ್ವಹಣೆ ಶ್ರೀಕ್ಷೇತ್ರದ ವತಿಯಿಂದ ಸುಲಲಿತವಾಗಿ ನಡೆಯಲು ಸಾಧ್ಯವಾಗಿಸಿರುವ ಪವಾಡ ಶಕ್ತಿಯೆಂದರೆ ಸಕಲ ಜೀವಾತ್ಮರ ಬಗ್ಗೆ ಶ್ರೀಕ್ಷೇತ್ರಾಧ್ಯಕ್ಷರಾದ ಶ್ರೀ ಶಿವಕುಮಾರ ಮಹಾಸ್ವಾಮಿಗಳವರಿಗಿರುವ ಅಪಾರ ವಾತ್ಸಲ್ಯ. ಶ್ರೀ ಶ್ರೀಗಳವರು ಕೈಗೊಳ್ಳುವ ಪ್ರತಿ ಕಾಯಕದಲ್ಲೂ ಈ ಮಹಾವಾತ್ಸಲ್ಯದ ಪ್ರಭಾವವನ್ನು ಕಾಣುತ್ತೇವೆ. ಶ್ರೀ ಶ್ರೀಗಳವರು ಅನುಸರಿಸುವ ಕಾರ್ಯ ವಿಧಾನಗಳಲ್ಲಿ ಕೆಲವೊಂದನ್ನು ಅವಲೋಕಿಸುವುದರ ಮೂಲಕ ಈ ವಾತ್ಸಲ್ಯಶ್ರೀಯ ಪರಿಚಯ ಮಾಡಿಕೊಡುವುದು ಈ ಕಿರುಲೇಖನದ ಉದ್ದೇಶ.

ಶ್ರೀ ಕ್ಷೇತ್ರದಲ್ಲಿ ಶ್ರೀ ಸ್ವಾಮೀಜಿಯವರನ್ನು ಸಂದರ್ಶಿಸಲು ಬರುವ ಜನರು ಯಾರ 'ಭೇಟಿಯ ಕಾಲ'ಕ್ಕೂ ಕಾಯಬೇಕಾಗಿಲ್ಲ. ಬೇರೆ ಹಲವೆಡೆಯಲ್ಲಿರುವಂತೆ ಯಾವ ಏಜೆಂಟರ್ ಮೂಲಕವೂ ಪೂರ್ವಾನುಮತಿಯನ್ನು ಪಡೆಯಬೇಕಿಲ್ಲ, ಚಿಕ್ಕವರಾಗಲಿ, ದೊಡ್ಡವರಾಗಲಿ, ಬಡವರಾಗಲಿ, ಬಲ್ಲಿದವರಾಗಲಿ ನೇರವಾಗಿ ಶ್ರೀ ಪೂಜ್ಯಪಾದರನ್ನು ಸಂದರ್ಶಿಸಬಹುದಾದ ಉಚ್ಚಸಂಪ್ರದಾಯ ಶ್ರೀಕ್ಷೇತ್ರದಲ್ಲಿ ಚಲಾವಣೆಯಲ್ಲಿದೆ. ಈ ಕ್ರಮದಿಂದ ಶ್ರೀಗಳವರಿಗೆ ಅಧಿಕ ಕಾಲವ್ಯಯ ಹಾಗೂ ಶ್ರಮ ಆಗಬಹುದು. ಆದರೆ ದರ್ಶನವನ್ನಪೇಕ್ಷಿಸಿ ಬರುವವರ ಬಗೆಗಿರುವ ಅವರ ವಾತ್ಸಲ್ಯದ ಮುಂದೆ ಈ ಶ್ರಮ ಗೌಣ.

ಶ್ರೀಕ್ಷೇತ್ರದಲ್ಲಿ ವಿದ್ಯಾಭ್ಯಾಸ ಮಾಡುತ್ತಿರುವ ಒಂಭತ್ತು ಸಾವಿರಕ್ಕೂ ಮಿಕ್ಕಿದ ಮಕ್ಕಳ ಬಗ್ಗೆ ಶ್ರೀಗಳವರಿಗೆ ಅಪರಿಮಿತ ವಾತ್ಸಲ್ಯ – ಈ ವಾತ್ಸಲ್ಯವು ಶ್ರೀಮಠಕ್ಕೆ ಮಕ್ಕಳನ್ನು ಸೇರಿಸಿಕೊಳ್ಳುವ ಸಮಯದಲ್ಲಿಯೇ ಪ್ರಕಟಗೊಳ್ಳುತ್ತದೆ. ಪ್ರತಿ ಅಭ್ಯರ್ಥಿಯನ್ನೂ ಸ್ವತಃ ವಿಚಾರಿಸಿ, ಅವನ ಅಗತ್ಯಗಳನ್ನು ತಿಳಿದು ಶ್ರೀಗಳು ತೀರ್ಮಾನ ಕೈಗೊಳ್ಳುತ್ತಾರೆ. ಈ ಕ್ರಮದಿಂದ ಸಹಾಯ ಕೋರಿಬಂದ ವಿದ್ಯಾರ್ಥಿಯು ಯಾವ ಕಮಿಟಿ ಮೆಂಬರಿನ ಹಂಗಿಗೂ ಒಳಗಾಗಬೇಕಿಲ್ಲ. ಪ್ರತಿ ಶಿಕ್ಷಣ ವರ್ಷದ ಆರಂಭದಲ್ಲಿ ಒಂದು ತಿಂಗಳಿಗೂ ಹೆಚ್ಚು ಕಾಲ ಶ್ರೀಗಳವರು ಈ ಬಗ್ಗೆ ಶ್ರಮ ವಹಿಸಬೇಕಾಗುತ್ತದೆ. ಅವರಿಗೆ ಮಕ್ಕಳ ಬಗ್ಗೆ ಇರುವ ವಾತ್ಸಲ್ಯದ ಮುಂದೆ ಈ ಶ್ರಮವು ಯಾವ ಲೆಕ್ಕಕ್ಕೂ ಇಲ್ಲ. ಅನೇಕ ಬಾರಿ ಶ್ರೀ ಸ್ವಾಮಿಗಳವರ ಹಿತೈಷಿ ಭಕ್ತರು ಈ ಬಗ್ಗೆ 'ಕಮಿಟಿಯೊಂದನ್ನು ಮಾಡಿ, ವಿದ್ಯಾರ್ಥಿಗಳ ಪ್ರವೇಶಕ್ಕೆ



* ನಿರ್ದೇಶಕರು, ಶ್ರೀ ಸಿದ್ಧಗಂಗಾ ತಾಂತ್ರಿಕ ಮಹಾವಿದ್ಯಾಲಯ, ತುಮಕೂರು



ಸಂಬಂಧಿಸಿದ ಕೆಲಸವನ್ನು ಅದಕ್ಕೆ ವಹಿಸಿದರೆ ತಮಗೆ ಸ್ವಲ್ಪ ಕೆಲಸ ಕಡಿಮೆಯಾಗುತ್ತದೆ' ಎಂದು ಅತ್ಯಂತ ಒಳ್ಳೆಯ ಭಾವನೆಯಿಂದಲೇ ಮಾಡಿದ ಸಲಹೆಗೆ ಶ್ರೀಗಳವರ ಚುಟುಕು ಉತ್ತರ : 'ಹೌದು, ಒಳ್ಳೆಯ ಸಲಹೆ; ಯೋಚನೆ ಮಾಡಬಹುದು'. ಸಲಹೆ ೮೦ ವರ್ಷಗಳಿಂದಲೂ ಯೋಚನಾ ಮಟ್ಟದಲ್ಲಿಯೇ ಉಳಿದಿದೆ !

ಶ್ರೀಕ್ಷೇತ್ರದ ವಿದ್ಯಾರ್ಥಿನಿಲಯದ ಮಕ್ಕಳು ಊಟ ಮಾಡುವ ವೇಳೆಯಲ್ಲಿ ದಿನಕ್ಕೆರಡು ಬಾರಿಯೂ ಭೋಜನ ಶಾಲೆಯಲ್ಲಿ ಹಾಜರಿದ್ದು, ಮಕ್ಕಳಿಗೆ ಉಣಬಡಿಸುವುದು ಶ್ರೀಗಳವರ ಕಾಯಕಗಳಲ್ಲೊಂದು. ೮೦ ವರ್ಷಗಳಿಂದ ನಿರಂತರವಾಗಿ ನಡೆದು ಬಂದಿರುವ ಶ್ರೀಗಳವರ ಈ ಕಾಯಕಕ್ಕೆ ಮಕ್ಕಳ ಬಗ್ಗೆ ಅವರಿಗಿರುವ ಅಗಾಧ ವಾತ್ಸಲ್ಯವಲ್ಲದೆ ಮತ್ತೇನು ?

ಉಪಾಧ್ಯಾಯ ವರ್ಗದವರಾಗಲಿ, ಸಿಬ್ಬಂದಿ ವರ್ಗದವರಾಗಲಿ, ಅಥವಾ ಬೇರೆ ಯಾರೇ ಆಗಲಿ 'ಉಚಿತ ವಿದ್ಯಾರ್ಥಿ ನಿಲಯದ'ವರೆಂದು ಇಲ್ಲಿ ಮಕ್ಕಳ ಬಗ್ಗೆ ತಿರಸ್ಕಾರ ಭಾವನೆಯಿಂದ ವರ್ತಿಸಿದರೆ, ಅಂತಹವರ ಬಗ್ಗೆ ಶ್ರೀಸ್ವಾಮಿಗಳವರು ಕಿಡಿಕಿಡಿಯಾಗುತ್ತಾರೆ. ಉದಾಹರಣೆಗಾಗಿ, ಶ್ರೀಕ್ಷೇತ್ರದ ಪ್ರತಿಯೊಬ್ಬ ವಿದ್ಯಾರ್ಥಿಯೂ ವಾರಕ್ಕೆರಡು ದಿನಗಳು ಸಾಯಂಕಾಲ ಶ್ರೀ ಮಠದ ಕೆಲಸ ಕಾರ್ಯಗಳಲ್ಲಿ ಪಾಲ್ಗೊಳ್ಳುತ್ತಾನೆ. ಈ ಶ್ರಮದಾನದಲ್ಲಿ ಶ್ರೀಗಳವರಾದಿಯಾಗಿ ಮಠದ ಸಿಬ್ಬಂದಿಯವರೆಲ್ಲಾ ಭಾಗವಹಿಸುತ್ತಾರೆ. ಮಕ್ಕಳ ಶಕ್ತಿಗೆ ಮೀರಿದ ಕೆಲಸವನ್ನು ಯಾರಾದರೂ (ಸಿಬ್ಬಂದಿ ವರ್ಗದವರು) ಅವರಿಗೆ ವಹಿಸಿದರೆ, ಆ ಬಗ್ಗೆ ಶ್ರೀಗಳವರು ತಮ್ಮ ಅಸಮಾಧಾನವನ್ನು ವ್ಯಕ್ತಪಡಿಸಿ 'ಅವರು ನಿಮ್ಮ ಮಕ್ಕಳೇ ಆಗಿದ್ದರೆ, ಅವರಿಗೆ ಈ ಕೆಲಸವನ್ನು ವಹಿಸುತ್ತಿದ್ದೀರಾ? ಯೋಚಿಸಿ' ಎಂದು ಬುದ್ಧಿವಾದ ಹೇಳಿದ್ದುಂಟು. ಶ್ರೀಗಳವರು ಖಾಯಿಲೆ ಬಿದ್ದ ವಿದ್ಯಾರ್ಥಿಗಳ ಯೋಗಕ್ಷೇಮಗಳನ್ನು ವಿಚಾರಿಸಿ ಅವರ ಉಪಚಾರಕ್ಕೆ ವ್ಯವಸ್ಥೆ ಮಾಡುತ್ತಾರೆ. ಮಕ್ಕಳ ಮಧ್ಯೆ ಉಂಟಾಗಬಹುದಾದ ಸಣ್ಣಪುಟ್ಟ ಕಲಹಗಳನ್ನು ಸ್ವತಃ ಬಗೆಹರಿಸಿ ಬುದ್ಧಿ ಹೇಳುತ್ತಾರೆ. ಊರಿಗೆ ಹೋಗುವ ವಿದ್ಯಾರ್ಥಿಗಳು ಖುದ್ದಾಗಿ ಶ್ರೀಗಳವರ ಅನುಮತಿಯನ್ನು ಪಡೆದು ಹೋಗಬೇಕು. ಈ ಕೆಲಸಗಳಿಗೆಲ್ಲಾ ತಗಲುವ ಕಾಲವನ್ನು ವ್ಯರ್ಥವೆಂದು ಶ್ರೀಗಳವರು ಎಂದೂ ತಿಳಿದಿಲ್ಲ. ಹೆಚ್ಚೇನು? ಇಲ್ಲಿರುವ ಮಕ್ಕಳಿಗೆಲ್ಲಾ 'ಸಪಿತಾ, ಪಿತರಸ್ತಾಸಾಂ ಕೇವಲಂ ಜನ್ಮ ಹೇತವಃ'. ಈ ರೀತಿ ಶ್ರೀಗಳವರ ವಾತ್ಸಲ್ಯವನ್ನುಂಡು ಬೆಳೆದ ಶ್ರೀಮಠದ ವಿದ್ಯಾರ್ಥಿಗಳಿಗೆ ತಾವು ಬೇರೆ ಅಲ್ಲ, ಮಠವು ಬೇರೆ ಅಲ್ಲ ಎಂಬ ಭಾವನೆ ಸ್ವಾಭಾವಿಕವಾಗಿ ಮೈಗೂಡುತ್ತದೆ. ಅಂತೆಯೇ ಅವರಾಡುವ ಮಾತುಗಳಲ್ಲಿ 'ನಮ್ಮ ಮಠ', 'ನಮ್ಮ ಸ್ವಾಮಿಗಳು' ಮುಂತಾದ ಆತ್ಮೀಯ ಪದಗಳು ಹಾಸುಹೊಕ್ಕಾಗಿರುತ್ತವೆ. ಪ್ರವಾಸಕ್ಕೆ ತೆರಳಿದ ಶ್ರೀ ಸ್ವಾಮಿಗಳವರು ಕಾರಿನಲ್ಲಿ ದಯಮಾಡಿಸಿದರೆನ್ನಿ, ಆ ಕಾರನ್ನು ದಾರಿಯಲ್ಲಿ ನೋಡಿದ ಶ್ರೀಮಠ ವಿದ್ಯಾರ್ಥಿಗಳ ಬಾಯಿಂದ ಬರುವ ಅತ್ಯಂತ ಸ್ವಾಭಾವಿಕ ಉದ್ಗಾರ: 'ಅಗೋ ನಮ್ಮ ಕಾರು ಬಂತು!', 'ಸ್ವಾಮಿಗಳವರ ಕಾರು ಬಂತು' ಎಂಬುದಾಗಿ ಅವರ ಬಾಯಿಂದ ಬರುವುದೇ ಇಲ್ಲ.

ಶ್ರೀಗಳವರ ವಾತ್ಸಲ್ಯಪೂರ್ಣ ವ್ಯಕ್ತಿತ್ವದಿಂದ ಪ್ರಭಾವಿತರಾದ ಶ್ರೀಮಠದ ಸಿಬ್ಬಂದಿಯವರಿಗೆ 'ಎಂಟು ಗಂಟೆಗಳ' ವ್ಯಾಧಿಯಿಲ್ಲ. ಉದಾಹರಣೆಗಾಗಿ, ಶ್ರೀಮಠದ ಪಾಕಶಾಲೆಯನ್ನು ತೆಗೆದುಕೊಳ್ಳೋಣ. ಒಂಭತ್ತು ಸಾವಿರ ವಿದ್ಯಾರ್ಥಿಗಳ ಹಾಗೂ ಸಾವಿರಾರು ಯಾತ್ರಿಕರ ಊಟದ ವ್ಯವಸ್ಥೆಯು ಇಲ್ಲಿ ನಡೆಯುತ್ತದೆ. ಗುರುತರ ಜವಾಬ್ದಾರಿಯನ್ನು ಹೊತ್ತು ಆಡುಗೆ ಕಾಯಕದಲ್ಲಿ ನಿರತರಾಗಿರುವವರ ಸಂಖ್ಯೆ ಹತ್ತಕ್ಕಿಂತ ಹೆಚ್ಚಿಲ್ಲ. ಸುಮಾರು ಮುಂಜಾನೆ ೫ ಗಂಟೆಗೆ ಪ್ರಾರಂಭವಾದ ಅವರ ಕಾಯಕ ರಾತ್ರಿ ೧೦ ಗಂಟೆಯವರೆಗೆ ನಿರಂತರವಾಗಿ ನಡೆದಿರುತ್ತದೆ. ದೈಹಿಕ ಶ್ರಮವನ್ನು ಲೆಕ್ಕಿಸದೆ ಧನ್ಯಭಾವದಿಂದ ಅವರನ್ನು ಕಾಯಕ ನಿರತರನ್ನಾಗಿಸಿರುವುದು ಶ್ರೀ ಸ್ವಾಮಿಗಳವರ ನಿರ್ಮಲಾಂತಃಕರಣವಲ್ಲದೆ ಮತ್ತೇನು? ಇದೇ ರೀತಿ, ಶ್ರೀಮಠದ ಜಮೀನಿನಲ್ಲಿ ಕೆಲಸ ಮಾಡುವವರು, ದನಕರುಗಳ ಉಸ್ತುವಾರಿ ನೋಡುವವರು ಮುಂತಾದ ಎಲ್ಲಾ ವಿಭಾಗಗಳ ಕೆಲಸದವರನ್ನೂ ಮುಖತಃ ಭೇಟಿ ಮಾಡಿ, ಅವರಲ್ಲಿ ಉತ್ಸಾಹ ತುಂಬುವುದು ಶ್ರೀಗಳವರ ದಿನಚರಿ.

ಎಷ್ಟು ಶ್ರಮದ ಕೆಲಸವೇ ಆಗಿರಲಿ, ಶ್ರೀ ಸ್ವಾಮಿಗಳವರು ಅವರೊಡನಿದ್ದರೆ ಕೆಲಸ ಮಾಡುವವರಿಗೆ, ಅದರಲ್ಲಿಯೂ ಶ್ರೀಮಠದ ವಿದ್ಯಾರ್ಥಿಗಳಿಗೆ, ಎಲ್ಲಿಲ್ಲದ ಆನಂದ ಹಾಗೂ ಉತ್ಸಾಹ. ೧೯೪೦ನೆಯ ಇಸವಿಯ ಮಾತು : ಶ್ರೀಮಠದಿಂದ ಸುಮಾರು ೨ ಮೈಲಿ ದೂರದಲ್ಲಿನ ಮೈದಾಳ ಕೆರೆ ಬಯಲಿನ ಮಠದ ಗದ್ದೆಯಿಂದ ಭತ್ತದ ಕೊಯ್ಲನ್ನು ಮಠಕ್ಕೆ ಸಾಗಿಸುವ ಕೆಲಸ. ತಲೆ ಹೊರೆಯಲ್ಲಿಯೇ ಹೊತ್ತು ಸಾಗಿಸಬೇಕಾಗಿತ್ತು. ಮಳೆ







ಬರುವ ಸೂಚನೆ ತೀವ್ರವಾಗಿದ್ದರಿಂದ ಎಷ್ಟು ವೇಳೆಯಾದರೂ ಆ ದಿನವೇ ಕೆಲಸ ಮುಗಿಸಬೇಕಿತ್ತು. ಸುಮಾರು ೨೦೦ ವಿದ್ಯಾರ್ಥಿಗಳು ಶ್ರೀ ಸ್ವಾಮಿಗಳವರೊಟ್ಟಿಗೆ ಸಾಯಂಕಾಲ ೪ ಗಂಟೆಗೆ ಕೆಲಸ ಪ್ರಾರಂಭಿಸಿದರು. ಶ್ರೀಗಳವರು ಹೊರೆ ಕಟ್ಟಿ ಹೊರಿಸುವುದು, ವಿದ್ಯಾರ್ಥಿಗಳು ಮಠಕ್ಕೆ ಸಾಗಿಸುವುದು, ವಿದ್ಯಾರ್ಥಿಗಳಿಗೆ ಹೊರೆ ಇಳಿಸಿ ವಾಪಸ್ಸು ಬರುವಾಗಲಾದರೂ ಕೊಂಚ ವಿಶ್ರಾಂತಿ ದೊರಕುತ್ತಿತ್ತು. ಶ್ರೀ ಸ್ವಾಮಿಗಳವರಿಗಾದರೋ, ಹೊರೆ ಕಟ್ಟಿ ಹೊರಿಸುವ ಕೆಲಸ ಸತತವಾಗಿ ನಡೆದೇ ಇತ್ತು. ಸುಮಾರು ರಾತ್ರಿ ೧೦.೩೦ ಗಂಟೆಗೆ ಮಠದಿಂದ ಊಟವನ್ನು ಗದ್ದೆಗೇ ತರಿಸಿ ಎಲ್ಲಾ ವಿದ್ಯಾರ್ಥಿಗಳಿಗೂ ಶ್ರೀ ಸ್ವಾಮಿಗಳವರು ಉಣಬಡಿಸಿದರು. ಕೆಲಸ ಮುಂದುವರಿಯಿತು. ಶ್ರೀ ಸ್ವಾಮಿಗಳವರು ಮಾತ್ರ ಪೂಜೆಗೆ ದಯಮಾಡಿಸಲೇ ಇಲ್ಲ. ಕೆಲಸ ಪೂರ್ಣಗೊಂಡು ಎಲ್ಲರೂ ಮಠವನ್ನು ಸೇರುವ ಹೊತ್ತಿಗೆ ರಾತ್ರಿ ೧ ಗಂಟೆ. ಕೇವಲ ಎರಡು ತಾಸುಗಳ ವಿಶ್ರಾಂತಿ ಪಡೆದು ೩ ಗಂಟೆಗೆ ದಿನಚರಿಯಂತೆ ಶ್ರೀಗಳು ಪೂಜೆಗೆ ದಯಮಾಡಿಸಿದರು. ಆ ದಿನ ರಾತ್ರಿ ೨ ಗಂಟೆಗೆ ಮಳೆ ಬಂದೇ ಬಂದಿತು. ಅಲ್ಲಿಯವರೆಗೆ ನಡೆದ ಕೆಲಸದ ಬಗ್ಗೆ ಎಲ್ಲರಿಗೂ ಅತ್ಯಂತ ತೃಪ್ತಿ ಹಾಗೂ ಹೆಮ್ಮೆ. ಶ್ರೀಮಠದ ಕೆಲಸ ಕಾರ್ಯಗಳಲ್ಲಿ ಇಂತಹ ಪ್ರಸಂಗಗಳು ಸಾವಿರಾರು. ಪ್ರತಿ ಸಂದರ್ಭದಲ್ಲಿಯೂ ಶ್ರೀಗಳವರ ವಾತ್ಸಲ್ಯಪೂರ್ಣ ವ್ಯಕ್ತಿತ್ವವು ಎಲ್ಲರಲ್ಲಿಯೂ ಶಕ್ತಿ ಉತ್ಸಾಹಗಳನ್ನು ತುಂಬುವ ಮಹಾಶಕ್ತಿಯಾಗಿದೆ.

ಶ್ರೀ ಶಿವಕುಮಾರ ಸ್ವಾಮಿಗಳವರ ವಾತ್ಸಲ್ಯ ಶ್ರೀಮಠದ ವಿದ್ಯಾರ್ಥಿಗಳಿಗೆ ಅಥವಾ ಸಿಬ್ಬಂದಿ ವರ್ಗದವರಿಗೆ ಸೀಮಿತವಾಗಿಲ್ಲ. ಅದರ ವಿಸ್ತಾರ ಇಡೀ ಜೀವಕೋಟಿಗೆ ಎನ್ನಬಹುದು. ಕೆಲವು ವರ್ಷಗಳ ಹಿಂದೆ ತುಮಕೂರು ಜಿಲ್ಲೆ ಹಾಗೂ ಸುತ್ತಮುತ್ತಣ ಪ್ರದೇಶದಲ್ಲಿ ಮಳೆಯಿಲ್ಲದ್ದರಿಂದ ಭೀಕರ ಕ್ಷಾಮ ಉಂಟಾಯಿತು. ಬಡಜನರು ಸಹಸ್ರಾರು ಸಂಖ್ಯೆಯಲ್ಲಿ ಸಹಾಯವನ್ನಪೇಕ್ಷಿಸಿ ಬಂದಾಗ, ಶ್ರೀ ಸ್ವಾಮಿಗಳವರು ಒಂದು ಕ್ಷಣವೂ ಹಿಂದೆ ಮುಂದೆ ನೋಡದೆ, ಅವರೆಲ್ಲರಿಗೂ ಶ್ರೀಮಠದಲ್ಲಿ ತಿಂಗಳು ಗಟ್ಟಲೆ ಊಟದ ವ್ಯವಸ್ಥೆ ಮಾಡಿದರು. ರಥದ ಬೀದಿಯ ತುಂಬಾ ಪಂಕ್ತಿ ಪಂಕ್ತಿಯಾಗಿ ಕುಳಿತು ಕೃತಜ್ಞತೆಯಿಂದ ಪ್ರಸಾದ ಸ್ವೀಕರಿಸುತ್ತಿದ್ದ ಸಾವಿರಾರು ಜನರನ್ನು ನೋಡುವುದೇ ಒಂದು ಅಪೂರ್ವ ಅನುಭವವಾಗಿತ್ತು. ಶ್ರೀಮಠದಲ್ಲಿನ ಅಲ್ಪಸ್ವಲ್ಪ ದಾಸ್ತಾನು ಈ ರೀತಿ (ಕ್ಷಾಮ ಪೀಡಿತ ಜನರಿಗೆ ಊಟ ಹಾಕುವುದರ ಮೂಲಕ) ವ್ಯಯವಾಗಿ ಹೋದರೆ ಮುಂದೆ ಸಂಸ್ಥೆಗೆ ತೊಂದರೆಯಾಗಬಹುದಲ್ಲವೇ ಎಂಬ ಸಂಶಯವನ್ನು ಶ್ರೀಮಠದ ಕೆಲವು ಹಿತೈಷಿಗಳು ವ್ಯಕ್ತಪಡಿಸಿದಾಗ, ಶ್ರೀಗಳವರ ಉತ್ತರ: 'ಈಗ ನಮಗಿರುವುದು ಎರಡೇ ದಾರಿ; ಅವರಿಗೆ ಊಟ ಹಾಕಬೇಕು ಅಥವಾ ಅವರು ಸಾಯಲು ಬಿಡಬೇಕು. ಎರಡನೆಯದಂತೂ ಸಾಧ್ಯವಿಲ್ಲದ ಮಾತು. ಶ್ರೀಮಠದಲ್ಲಿರಬಹುದಾದ ಅಲ್ಪಸ್ವಲ್ಪ ಸಂಗ್ರಹವೂ ಕೂಡ ಶ್ರೀ ಸಿದ್ಧಲಿಂಗ ಕೃಪೆಯಿಂದ ಬಂದದ್ದು; ಅದು ಅವನ ಮಕ್ಕಳ ಹಸಿವು ನಿವಾರಣೆಗೆ ಉಪಯೋಗವಾಗಲಿ', ದೈವ ಕೃಪೆ, ಮಾರನೇ ವರ್ಷ ತುಮಕೂರು ಹಾಗೂ ಸುತ್ತಮುತ್ತಣ ಪ್ರದೇಶದಲ್ಲಿ ಸಮೃದ್ಧಿಯಾಗಿ ಬೆಳೆಯಾಯಿತು. ಉಪಕೃತ ಜನರು (ಅವರಲ್ಲಿ ಹಳ್ಳಿಯ ಹಾಗೂ ಅನಕ್ಷರಸ್ಥರೇ ಹೆಚ್ಚಾಗಿ) ತಲೆ ಹೊರೆಯಲ್ಲಿ, ಗಾಡಿಗಳಲ್ಲಿ ತಾವು ಬೆಳೆದ ದವಸ ಧಾನ್ಯಗಳನ್ನು ತಾವಾಗಿಯೇ ಅತ್ಯಂತ ಪ್ರೀತಿ ಹಾಗೂ ಭಕ್ತಿಯಿಂದ ಶ್ರೀಮಠಕ್ಕೆ ತಂದು ಅರ್ಪಿಸುವ ಮೂಲಕ ಕೃತಜ್ಞತೆಯನ್ನು ವ್ಯಕ್ತಪಡಿಸಿದರು. ಶ್ರೀ ಸ್ವಾಮಿಗಳವರ ಮಾತಿನಲ್ಲೇ ಹೇಳುವುದಾದರೆ 'ಆ ವರ್ಷ ಧಾನ್ಯ ಸಂಗ್ರಹಕ್ಕಾಗಿ ಭಿಕ್ಷೆಕ್ಕೆ ಹೋಗುವುದು ಹಾಗಿರಲಿ, ತಾನಾಗಿ ಬಂದ ಧಾನ್ಯವನ್ನು ಇಡಲು ಮಠದ ಕಣಜಗಳಲ್ಲಿ ಸ್ಥಳ ಸಾಲಲಿಲ್ಲ'. ಎಲ್ಲರ ಬಗ್ಗೆ ಶ್ರೀಗಳಿಗಿರುವ ಅನುಕಂಪ ಹಾಗೂ ವಾತ್ಸಲ್ಯಗಳಲ್ಲದೆ ಬೇರೇನೂ ತಾನೇ ಈ ಪವಾಡವನ್ನು ಸಾಧಿಸಬಲ್ಲದು ?

'ಸಕಲ ಪ್ರಾಣಿಗಳಲ್ಲಿ ದಯೆ' ಶ್ರೀಗಳವರ ಸಹಜ ಗುಣ. ಮಠದ ಆವರಣದಲ್ಲಿಯೋ, ಹೊಲ ಗದ್ದೆಗಳಲ್ಲಿಯೋ ಹಾವೊಂದು ಕಾಣಿಸಿಕೊಂಡಾಗ, ಅದನ್ನು ಕೊಲ್ಲಲು ಪ್ರಯತ್ನಿಸುವುದು ಹುಡುಗರ ಸ್ವಭಾವ. ಆ ಸಂದರ್ಭದಲ್ಲಿ ಶ್ರೀಗಳವರು ಆ ಸ್ಥಳದಲ್ಲಿದ್ದರೆ ಆ ಹಾವು ಪುಣ್ಯ ಮಾಡಿತ್ತೆಂದೇ ಅರ್ಥ. 'ನೀವು ಅದಕ್ಕೆ ತೊಂದರೆ ಮಾಡದಿದ್ದರೆ ಅದು ನಿಮಗೆ ಯಾವ ಹಾನಿಯನ್ನೂ ಮಾಡದು; ಅದನ್ನು ಕೊಲ್ಲಬಾರದು' ಎಂದು ಹುಡುಗರಿಗೆ ವಿವೇಕ ಹೇಳುವ ಹೊತ್ತಿಗೆ ಹಾವು ಕುತ್ತಿನಿಂದ ಪಾರಾಗಿ ಹೋಗಿರುತ್ತದೆ. ಸಾವಿರಾರು ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಿರುವ ಈ ಸುಕ್ಷೇತ್ರದಲ್ಲಿ ಇದುವರೆಗೆ ವಿಷಜಂತುಗಳಿಂದ ತೊಂದರೆಯುಂಟಾಗುವ ಯಾವ ಸಂದರ್ಭವೂ ಬಂದಿಲ್ಲ.









ಶ್ರೀಮಠಕ್ಕೆ ಯಾತ್ರೆ ಬರುವವರ ಪೈಕಿ ತರಹೆವಾರಿ ಜನಗಳು ಇರುತ್ತಾರೆ. ಕೆಲವೊಮ್ಮೆ ಮಠದಲ್ಲಿ ಸಣ್ಣಪುಟ್ಟ ಕಳ್ಳತನ ಮಾಡಿ ಸಿಕ್ಕಿ ಬಿದ್ದಿರುವವರೂ ಉಂಟು. ಸಿಬ್ಬಂದಿಯವರು ಹಾಗೂ ವಿದ್ಯಾರ್ಥಿಗಳು ಅಂತಹ ಕಳ್ಳನಿಗೆ ನಾಲ್ಕಾರು ಏಟು ಮುಂತಾದ ಶಿಕ್ಷೆ ಕೊಡಲು ಪ್ರಯತ್ನಿಸುವುದು ಸ್ವಾಭಾವಿಕ. ಇಂತಹ ಸುದ್ದಿ ಶ್ರೀ ಸ್ವಾಮಿಗಳ ಕಿವಿಗೆ ಬಿದ್ದಕೂಡಲೇ, ಕಳ್ಳನನ್ನು ಸನ್ನಿಧಿಗೆ ಕರೆತರಲು ಅಪ್ಪಣೆಯಾಗುತ್ತದೆ. 'ಇವನಿಗೆ ಸರಿಯಾಗಿ ಬುದ್ಧಿ ಕಲಿಸಬೇಕು; ಪೊಲೀಸರಿಗೆ ಕೊಡಬೇಕು...' ಎಂದೆಲ್ಲಾ ಹೇಳುತ್ತಾ ಅವನನ್ನು ಅನುಸರಿಸಿ ಬರುವ ಗುಂಪನ್ನು ಗದರಿಸಿ ವಾಪಸ್ಸು ಕಳುಹಿಸುತ್ತಾರೆ. ಅವನನ್ನು ಕರುಣೆಯಿಂದ ವಿಚಾರಿಸಿ, ಅವನು ಮಾಡುತ್ತಿರುವ ಕೆಲಸ ಸರಿಯಲ್ಲವೆಂದು ವಿವೇಕ ಹೇಳಿ, ಅವನಿಗೆ ಮಠದಲ್ಲಿ ಊಟ ಹಾಕಿಸಿ, ಮಠದ ಆವರಣವನ್ನು ಅವನು ಬಿಡುವವರೆಗೆ ಅವನಿಗೆ ರಕ್ಷಣೆ ಒದಗಿಸಿ ಕಳುಹಿಸಿ ಕೊಡುತ್ತಾರೆ. ಅವನು ಕಳ್ಳತನ ಮಾಡಿದನೆನ್ನುವುದಕ್ಕಿಂತ, ಆತನು ಹಾಗೆ ಮಾಡಲು ಅವರ ಪರಿಸ್ಥಿತಿ ಎಷ್ಟು ಕಷ್ಟದ್ದಿತ್ತೋ ಎನ್ನುವುದು ಈ ಕರುಣಾಮೂರ್ತಿಯ ಹೃದಯವನ್ನು ಹಿಂಡುತ್ತದೆ. ಬಸವಣ್ಣನ ನಿಜಭಕ್ತರು ಬೇರಾವ ರೀತಿಯಲ್ಲಿ ತಾನೇ ವ್ಯವಹರಿಸಲು ಸಾಧ್ಯ? ತಪ್ಪು ಮಾಡಿದವನನ್ನು ದಾರಿಗೆ ತರಲು ಶಿಕ್ಷೆಯೊಂದು ಮಾರ್ಗವಾದರೂ, ಆ ತಪ್ಪು ಆಗುವುದೇಕೆ? ಕಾರಣವಾದ ಮೂಲ ಸಮಸ್ಯೆಯನ್ನು ಹುಡುಕಿ ಅದಕ್ಕೆ ಪರಿಹಾರ ಒದಗಿಸುವುದು ಅತ್ಯಂತ ಸೂಕ್ತ ವಿಧಾನವೆನ್ನುವುದು ಶ್ರೀಗಳವರ ತೀರ್ಮಾನ. ಅಂತೆಯೇ ಶ್ರೀಮಠದ ವಿದ್ಯಾರ್ಥಿಗಳು ಸಣ್ಣಪುಟ್ಟ ತಪ್ಪುಗಳನ್ನು ಮಾಡಿದಾಗ ಅಥವಾ ಪರೀಕ್ಷೆಯಲ್ಲಿ ನಪಾಸಾದಾಗ, ಶ್ರೀಗಳವರು ಆ ಬಗ್ಗೆ ತೀವ್ರ ಅಸಮಾಧಾನ ವ್ಯಕ್ತಪಡಿಸುತ್ತಾರಾದರೂ, ಅವರಿಗೆ ಊಟ ನಿಲ್ಲಿಸುವ ಅಥವಾ ಅವರನ್ನು ವಿದ್ಯಾರ್ಥಿ ನಿಲಯದಿಂದ ಹೊರಹಾಕುವ ಯಾವ ಕಠಿಣ ಕ್ರಮವನ್ನು ಕೈಕೊಳ್ಳುವುದಿಲ್ಲ. ಯಾರಾದರೂ ಅವರ ಮಕ್ಕಳು ಪರೀಕ್ಷೆಯಲ್ಲಿ ನಪಾಸಾದರೆ ಅವರನ್ನು ಉಪವಾಸ ಹಾಕುವರೇ ಅಥವಾ ಮನೆಯಿಂದ ಹೊರದೂಡುವರೇ ?

ಶ್ರೀಮಠದ ವತಿಯಿಂದ ನಡೆಯುತ್ತಿರುವ ಅನೇಕ ವಿದ್ಯಾ ಸಂಸ್ಥೆಗಳಲ್ಲಿ ನೂರಾರು ಉಪಾಧ್ಯಾಯರು ಹಾಗೂ ಸಿಬ್ಬಂದಿ ವರ್ಗದವರು ಕೆಲಸ ಮಾಡುತ್ತಾರೆ. ಅವರಲ್ಲಿ ಯಾರಾದರೂ ಅಕ್ರಮ ವ್ಯವಹಾರದಲ್ಲಿ ತೊಡಗಿದ್ದು, ಅದು ಶ್ರೀಗಳವರ ಗಮನಕ್ಕೆ ಬರುವುದುಂಟು. ಅಂತಹ ಸಂದರ್ಭದಲ್ಲಿ ಅತ್ಯಂತ ಹೆಚ್ಚಿಗೆ ನೋವನ್ನನುಭವಿಸುವವರು ಶ್ರೀ ಸ್ವಾಮಿಗಳವರು. 'ಅವರು ಏನು ಮಾಡುತ್ತಿದ್ದಾರೆನ್ನುವುದು ಅವರಿಗೆ ತಿಳಿಯದು. ದೇವರೇ ಅವರನ್ನು ಕ್ಷಮಿಸು' ಎಂದು ಶ್ರೀ ಗುರುಸಿದ್ಧಲಿಂಗನಲ್ಲಿ ಮರುಕದಿಂದ ಪ್ರಾರ್ಥಿಸುತ್ತಾರೆ. ಸಂಸ್ಥೆಯ ಅಧ್ಯಕ್ಷರಾಗಿ, ಏನಾದರೂ ಔಪಚಾರಿಕ ಶಿಕ್ಷೆಯನ್ನು ಕೊಡಬಹುದೇ ವಿನಾ ಉಗ್ರಕ್ರಮವನ್ನೆಂದೂ ಕೈಗೊಂಡಿಲ್ಲ. ಈ ಬಗ್ಗೆ, ಸಾಮಾನ್ಯಸ್ತರದಲ್ಲಿ ಯೋಚನೆ ಮಾಡುವ ನಮ್ಮಂತಹವರಿಗೆ ಶ್ರೀ ಸ್ವಾಮಿಗಳವರ ಈ ಕಾರ್ಯ ವಿಧಾನವು ತುಸು ಅಸಮಾಧಾನವನ್ನು ತರಲೂಬಹುದು. ಆದರೆ ಬುದ್ಧಿ ಹಾಗೂ ಹೃದಯಗಳ ಪರಿಪಕ್ವತೆಯನ್ನು ಪಡೆದಿರುವ ಆ ದಿವ್ಯಚೇತನ ಈ ಸಮಸ್ಯೆಗಳನ್ನು ನೋಡುವ ದೃಷ್ಟಿಯೇ ಬೇರೆ. ವ್ಯಕ್ತಿಯೊಬ್ಬನ ಮೇಲೆ ಕಠಿಣ ಕ್ರಮವನ್ನು ಕೈಗೊಂಡರೆ, ಅದರಿಂದ ವ್ಯಕ್ತಿಯ ಮೇಲಾಗುವ ಪರಿಣಾಮ, ಅವನನ್ನವಲಂಬಿಸಿರುವ ಅವನ ಸಂಸಾರದ ಕಷ್ಟಸ್ಥಿತಿ ಇವುಗಳ ಬಗ್ಗೆ ಶ್ರೀಗಳವರ ವಿಶಾಲ ಹೃದಯ ಸ್ಪಂದನಗೊಳ್ಳುತ್ತದೆ. ಬೇರೆಯವರ ಕಷ್ಟವೇ ತಮ್ಮ ಕಷ್ಟ ಎಂದು ತಿಳಿದಿರುವ ಈ ಮಹಾಚೇತನವು ಅಂತಹ ಸಂದರ್ಭಗಳಲ್ಲಿ ತೆಗೆದುಕೊಳ್ಳುವ ತೀರ್ಮಾನವು ಸಾಮಾನ್ಯ ಮಟ್ಟದ ನನಗೆ ಅರ್ಥವಾಗುವುದು ಕಷ್ಟವೇ ಸರಿ !!



ನುಡಿನಮನ

# ಸಂಸ್ಕಾರವಂತ ಶಿಷ್ಯರನ್ನಾಗಿ ರೂಪಿಸಿದ ಶ್ರೀ ಶ್ರೀ ಶಿವಕುಮಾರ ಶಿವಯೋಗಿಗಳು

- ಬಿ.ಎಂ. ಪರಮೇಶ್ವರಪ್ಪ *

ಪೂಜ್ಯರು ಶ್ರೀಮಠದಲ್ಲಿ ಹಿಂದೆ ಓದಿದ ಈಗ ಓದುತ್ತಿರುವ ವಿದ್ಯಾರ್ಥಿಗಳನ್ನು ನೋಡುವ ದೃಷ್ಟಿಯೇ ವಿಶೇಷ. ಅವರನ್ನು ಪ್ರತ್ಯಕ್ಷ ದೈವಸ್ವರೂಪಿಗಳೆಂದು ಕಂಡವರು. ಅವರುಗಳ ಉತ್ತಮ ಬದುಕನ್ನು ನೋಡಿ ಸಂತಸಪಟ್ಟಿದ್ದಾರೆ. ಪೂಜ್ಯರ ೮೮ ವರ್ಷಗಳ ಮಹತ್ವದ ಪರಮ ದಾಸೋಹ ಜೀವನದಲಿ ಮಕ್ಕಳಿಗೆ ಅಕ್ಕರೆಯಿಂದ ಪ್ರಸಾದ ನೀಡಿದ್ದಾರೆ. ಆಸರೆಗೆ ತೊಂದರೆಯಾಗದಂತೆ ನೋಡಿಕೊಂಡಿದ್ದಾರೆ. ಅಕ್ಷರ ದಾಸೋಹಕ್ಕೆ ಮಹತ್ತರ ಸ್ಥಾನ ನೀಡಿ, ಮಠದಲ್ಲಿ ಕಲಿತವರೆಲ್ಲರು ಅವರ ಕಾಲ ಮೇಲೆ ನಿಂತು ದುಡಿದುಣ್ಣುವ ಕಲೆಯನ್ನು ಕಲಿಸಿಕೊಟ್ಟಿದ್ದಾರೆ, ತನ್ಮೂಲಕ ಸಂಸ್ಕಾರವಂತ ಶಿಷ್ಯರನ್ನು ನಾಡಿಗೆ ನೀಡಿದ ಹೆಗ್ಗಳಿಗೆ ಪೂಜ್ಯರದು. ಈ ಕಾರಣದಿಂದ ಶ್ರೀಮಠದಲ್ಲಿ ಕಲಿತ ವಿದ್ಯಾರ್ಥಿಗಳಿಗೆ ಸಾರ್ವಜನಿಕ ಜೀವನದಲ್ಲಿ ವಿಶೇಷ ಸ್ಥಾನವಿರುವುದನ್ನು ಕಾಣಬಹುದಾಗಿದೆ. ಮಠದಲ್ಲಿ ಕಲಿತು ಹೋದ ವಿದ್ಯಾರ್ಥಿಗಳು ಬಹುತೇಕರು ಆರ್ಥಿಕವಾಗಿ ಬಡವರು, ಅದರಲ್ಲೂ ಉತ್ತರ ಕರ್ನಾಟಕ ಭಾಗದ ಜಿಲ್ಲೆಗಳಾದ ಬಳ್ಳಾರಿ, ರಾಯಚೂರು, ಬೀದರ್, ಗುಲಬರ್ಗ, ಯಾದಗಿರಿ, ಕೊಪ್ಪಳ, ಗದಗ, ಬಿಜಾಪುರ, ಬಾಗಲಕೋಟೆ, ಹಾವೇರಿ, ಧಾರವಾಡ, ಬೆಳಗಾವಿ, ಈ ಜಿಲ್ಲೆಗಳಿಂದ ಬಂದವರಂತೂ ಅವರ ಊರುಗಳಲ್ಲಿ ಕನಿಷ್ಟ ಸೌಲಭ್ಯದಿಂದಲೂ ವಂಚಿತರಾದವರು. ಶ್ರೀಮಠದ ಸೇವಾಕಾರ್ಯದಿಂದ ಪ್ರಭಾವಿತರಾದ ಹಳೆಯ ವಿದ್ಯಾರ್ಥಿಗಳು ಆನಂತರದಲಿ ಕಟ್ಟಿಕೊಂಡ ಹೃದಯವಂತಿಕೆಯ ಬದುಕನ್ನು ನೋಡಿದಾಗ ದಿಗ್ಭ್ರಮೆಯಾಗುತ್ತದೆ. ಶ್ರೀಮಠದ ಬಗ್ಗೆ ಇರುವ ಗೌರವ, ಪೂಜ್ಯರ ಬಗ್ಗೆ ಇರುವ ನಿಷ್ಕಲ್ಮಶ ಭಕ್ತಿಯನ್ನು ವರ್ಣಿಸಲಸಾಧ್ಯ. ಅಂತಹವುಗಳಲ್ಲಿ ಓದುಗರ ಮಾಹಿತಿಗಾಗಿ ಕೆಲವನ್ನು ಇಲ್ಲಿ ಕೊಡಲಾಗಿದೆ.

### ೧. ಪೂಜ್ಯರ ಜನ್ಮದಿನವೇ ನಮಗೆ ಮಹತ್ವದ ದಿನ :

**೧-೪-೨೦೧೮ ರಂದು** ನಡೆದ ಪೂಜ್ಯರ ೧೧೧ನೇ ಜನ್ಮದಿನೋತ್ಸವದಲಿ ಉತ್ತರ ಕರ್ನಾಟಕ ಭಾಗದ ಸಾವಿರಾರು ಹಳೆಯ ವಿದ್ಯಾರ್ಥಿಗಳು ಭಾಗವಹಿಸಿದ್ದರು. ಅವರ ಸಂತಸ, ಅವರ ನಡೆ-ನುಡಿ, ಚಿಂತನೆಗಳೆಲ್ಲವೂ ಪೂಜ್ಯರು ಮತ್ತು ಶ್ರೀಮಠದ ಬಗ್ಗೆಯೇ ಆಗಿದ್ದವು. ಅವು ಕಲ್ಪನಾತೀತ ವಿದಾಯಕ ವಿಚಾರಗಳೇ ಆಗಿದ್ದವು. ನನ್ನ ಕುತೂಹಲಕ್ಕಾಗಿ ರಾಯಚೂರು ಜಿಲ್ಲೆಯ ಟಿ. ನಾಗರಾಜು ಎಂಬ ಹಳೆಯ ವಿದ್ಯಾರ್ಥಿಯನ್ನು ಕೇಳಿದೆ. ಈ ದಿವಸ ಹೊಸ ಬಟ್ಟೆ ಹಾಕಿದ್ದೀರಿ. ಏನು ವಿಶೇಷ? ಆತ ಉತ್ತರಿಸಿದ್ದು ಹೀಗೆ : ನನಗೆ ತಾತಯ್ಯರ ಜನ್ಮದಿನೋತ್ಸವವು ವಿಶೇಷವಾದ್ದರಿಂದ ಹೊಸ ಬಟ್ಟೆಯನ್ನು ತಪ್ಪದೇ ಪ್ರತೀವರ್ಷ ಹಾಕಿಕೊಳ್ಳುತ್ತೇನೆ. ನಾನು ಹುಟ್ಟಿದ ದಿವಸವನ್ನು ವಿಶೇಷ ಎಂದು ಪರಿಗಣಿಸುವುದಿಲ್ಲ. ಹೊಸ ಬಟ್ಟೆ ಹಾಕಿಕೊಳ್ಳವುದೂ ಇಲ್ಲ. ಮತ್ತೆ ನಾನು ಪ್ರಶ್ನೆ ಹಾಕಿದೆ ಏಕೆ ? ಎಂದು. ನೋಡಿ ನಮ್ಮಂತಹ ಲಕ್ಷಾನುಲಕ್ಷ ವಿದ್ಯಾರ್ಥಿಗಳು ಶ್ರೀಮಠದಲ್ಲಿ ಕಲಿಯುವಾಗ, ಪೂಜ್ಯರು ತೋರಿದ ದಯೆ, ಕರುಣೆ, ಅನುಕಂಪೆ, ಮಾನವೀಯತೆ, ಕಲಿಸಿದ ಶಿಸ್ತು, ಮೇಲಾಗಿ ಔದಾರ್ಯ ಇವುಗಳನ್ನು ನೆನಪು ಮಾಡಿಕೊಂಡಾಗ, ಮಾತು ಮೌನವಾಗುತ್ತದೆ. ಕಣ್ಣಲ್ಲಿ ನೀರು ಸೂಸುತ್ತದೆ. ಹೃದಯತುಂಬಿ ಬರುತ್ತದೆ. ನಾವು ಆರ್ಥಿಕವಾಗಿ ಬಡವರಾದರೂ ಕೂಡ ಪೂಜ್ಯರ ಕಾರುಣ್ಯದಿಂದ ಬದುಕಿನಲ್ಲಿ ನೆಮ್ಮದಿ ಕಂಡಿದ್ದೇವೆ. ನಮ್ಮದು ಶಾಂತಿಯ ಬದುಕಾಗಿದೆ, ಆನಂದದಿಂದ ಬದುಕುತ್ತಿದ್ದೇವೆ. ಸಮಾಧಾನಕ್ಕಂತೂ ಕೊರತೆಯೇ ಇಲ್ಲ. ಪೂಜ್ಯರು ಇಂತಹ ಬದುಕನ್ನು ಕಟ್ಟಿಕೊಳ್ಳಲು ಕಲಿಸಿಕೊಟ್ಟರು ಹಾಗೂ ಶ್ರೀಮಠದ ವಾಸ್ತವ್ಯಂತೂ ನಮ್ಮ ಜೀವಿತದ ಪುಣ್ಯಕಾಲ ಎಂಬುದು ನಿಸ್ಸಂದೇಹ. ಶ್ರೀಮಠದಲ್ಲಿ ಕಲಿಯುವ ಅವಕಾಶ ಪಡೆದವರು ನಿಜಕ್ಕೂ ಭಾಗ್ಯವಂತರು ಎನ್ನುವುದು ನನ್ನ ಅನಿಸಿಕೆ. ಆದ್ದರಿಂದ ಏಪ್ರಿಲ್ ೧ನೇ ತಾರೀಖು ಅತ್ಯಂತ ಮಹತ್ವದ್ದು ಎಂದು ಆತನ ಜೊತೆಯಲ್ಲಿದ್ದ ಲಿಂಗಸಗೂರಿನ ಮಹೇಶಶಾಸ್ತ್ರಿ, ಶಿವಕುಮಾರ

* ವಿಶ್ರಾಂತ ಕಾರ್ಯಪಾಲಕ ಅಭಿಯಂತರರು, ಬಾಸೂರು.







ನಂದಿಕೋಲಮಠ ಮುಂತಾದವರು ಒಕ್ಕೊರಲಿನಿಂದ ಉತ್ತರಿಸಿದರು. ಅವರೆಲ್ಲ ಹೊರಗೆ ಬಡವರು ಒಳಗೆ ಶ್ರೀಮಂತರಾಗಿದ್ದರು. ಹೀಗೆ ನಿಜವಾದ ಬದುಕಿನ ಮರ್ಮವನ್ನು ಅವರಿಂದ ತಿಳಿದಂತಾಯಿತು. ಎಲ್ಲವೂ ಇದ್ದರೂ ಕೂಡ ಏನೂ ಇಲ್ಲ ಎಂದು ಬದುಕುವ ಒಂದು ವರ್ಗ, ಇರುವುದರಲ್ಲಿ ಸಂತಸದ ಬದುಕು ಸಾಗಿಸುವವರು ಮತ್ತೊಂದು ವರ್ಗ. ಇಂತಹವರನ್ನು ಸೃಷ್ಟಿಸಿದ ಪೂಜ್ಯರ ಸೇವೆಯನ್ನು ವರ್ಣಿಸಲಸಾಧ್ಯ.

### ೨. ಕೈಲಾಸ ಬೇರೊಂದಿರಲಾರದು:

ಶ್ರೀಮಠದಲ್ಲಿ ಕಲಿತ ರಾಯಚೂರು ಜಿಲ್ಲೆಯ ಲಿಂಗಸಗೂರಿನ ಹಳೆಯ ವಿದ್ಯಾರ್ಥಿಗಳಿಗೆ ೧೧-೦೩-೨೦೦೬ ಅವಿಸ್ಮರಣೀಯ ದಿನ. ಪೂಜ್ಯರಿಗೆ ಗುರುವಂದನೆ ಕಾರ್ಯಕ್ರಮವನ್ನು ಅತ್ಯಂತ ಭಕ್ತಿಯಿಂದ, ಶಿಸ್ತಿನಿಂದ, ಅಚ್ಚುಕಟ್ಟಾಗಿ ನಡೆಸಿದ್ದು ಪೂಜ್ಯರಿಗೆ ಪ್ರಭಾವ ಬೀರಿತ್ತು. ಅದು ಮುಗಿದು ಒಂದು ವಾರದವರೆಗೆ ಅದೇ ಗುಂಗಿನಲ್ಲಿ ಆನಂದದಿಂದ ಮಠದಲ್ಲಿ ಭಕ್ತರೊಂದಿಗೆ ಚರ್ಚಿಸುತ್ತಿದ್ದರು. ಅವರ ಹೃದಯಾಳದ ಮಾತುಗಳನ್ನು ೨೦೦೬ನೇ ಇಸವಿ ಏಪ್ರಿಲ್ ತಿಂಗಳ ಸಿದ್ಧಗಂಗಾ ಮಾಸಪತ್ರಿಕೆಯಲ್ಲಿ **'ಕಣ್ಣೀರಿಟ್ಟರು'** ಎಂದು ಶ್ರೀವಾಣಿಯಲ್ಲಿ ಪ್ರಕಟಿಸಲಾಗಿದೆ. ಅದನ್ನು ಯತಾವತ್ತಾಗಿ ಕೊಡಲಾಗಿದೆ.

"ಅದೊಂದು ಅವಿಸ್ಮರಣೀಯ ಸಮಾರಂಭ. ನಡೆಸಿಕೊಟ್ಟವರು ರಾಯಚೂರು ಜಿಲ್ಲೆಯ ಶ್ರೀ ಸಿದ್ಧಗಂಗಾಮಠದ ಹಳೆಯ ವಿದ್ಯಾರ್ಥಿಗಳು. ಅವರೆಲ್ಲ ಶ್ರೀಮಠದಲ್ಲಿ ಕೆಲವಾರು ವರ್ಷ ಆಶ್ರಯ ಪಡೆದು ತಮ್ಮೂರಿಗೆ ಮರಳಿದವರು. ಅವರಿಗಾಗಿ ಶ್ರೀಮಠದಲ್ಲಿ ವಿಶೇಷವಾದ ಸೌಲಭ್ಯಗಳೇನನ್ನೂ ಮಾಡಿರಲಿಲ್ಲ. ಎಲ್ಲ ವಿದ್ಯಾರ್ಥಿಗಳಂತೆಯೇ ಅವರು ಪ್ರಸಾದ, ವ್ಯಾಸಂಗಾವಕಾಶಗಳನ್ನು ಪಡೆದುಕೊಂಡವರಾಗಿದ್ದರು. 'ಪರರುಪಕಾರವ ಪರ್ವತದಂತೆ' ಪರಿಭಾವಿಸಿದ ಸಂಸ್ಕೃತಿ ಅವರಲ್ಲಿ ಎದ್ದು ಕಾಣುತ್ತಿತ್ತು. ಅಂದು ಅವರೆಲ್ಲ ನಡೆದುಕೊಂಡ ರೀತಿ ಅನುಕರಣೀಯವಾಯಿತು. ಸುಮಾರು ಹತ್ತು ಮೈಗಿಗಳುದ್ದದಿಂದ ನಮ್ಮನ್ನು ಲಿಂಗಸಗೂರಿಗೆ ನೂರಾರು ಮೋಟಾರು ಬೈಕುಗಳ ಸಮೇತ ಗೌರವರಕ್ಷೆಯಿಂದ ಸ್ವಾಗತಿಸಿದ ಉತ್ಸಾಹ ಅವರದ್ದು. ಪಟ್ಟಣದ ತುಂಬಾ ಮೆರವಣಿಗೆಯೆಂಬಂತೆ ಕರೆದೊಯ್ದರು. ಅವರ ಆನಂದಕ್ಕೆ ಎಲ್ಲೆಯಿರಲಿಲ್ಲ. ಸಮಾರಂಭ ಮುಗಿಯಿತು. ನಾಟಕ ಅಂತ್ಯಗೊಂಡಿತು. ಮರುದಿನ ಬೆಳಿಗ್ಗೆ ನಮ್ಮದು ಪೂಜೆ ಪ್ರಸಾದವಾಯಿತು. ಶ್ರೀಮಠದತ್ತ ಪ್ರಯಾಣಕ್ಕೆ ಸಿದ್ಧರಾದೆವು. ಎಲ್ಲ ವಿದ್ಯಾರ್ಥಿಗಳು ಬಂದು ನಿಂತರು, ಅವರ ಕಣ್ಣುಗಳು ತುಂಬಿ ಬರುತ್ತಿದ್ದವು. ಮಾತುಗಳು ಭಕ್ತಿಕಂಪಿತವಾಗಿದ್ದವು. ಒಬ್ಬೊಬ್ಬರಾಗಿ ಬಾಗಿ ನಮಸ್ಕರಿಸುತ್ತಾ ಹೋದರು. ಕರುಳು ಕೊನರಿತು ಕಣ್ಣೀರು ಹರಿಯಿತು. ನಮಗಂತೂ ಹೃದಯತುಂಬಿ ಬಂತು. ನಮಗೆ ತೊಂಬತ್ತೆಂಟೆಂಬುದೇ ಮರೆತು ಹೋಯಿತು. ಅವರೆಲ್ಲ ಕೇಳುತ್ತಿದ್ದರು. 'ಬುದ್ಧೀ ಮತ್ತೆ ಯಾವಾಗ ಇತ್ತ ಬರುತ್ತೀರಿ' ಎಂದು. ಕಾರಿನ ಡ್ರೈವರ್ ರಾಜು ಕಾರು ಚಲಿಸುವ ಕ್ಷಣಗಳನ್ನೇ ನಿರೀಕ್ಷಿಸುತ್ತಿದ್ದ. ದಾರಿ ತೋರಿಸಿದರು. ಕಾರು ಮುಂದೆ ಸಾಗಿತು. **ಮನಸ್ಸು ಆ ಎಲ್ಲ ಮಕ್ಕಳನ್ನು ನೆನೆದು ಹರ್ಷಿಸಿತು. ಇದಕ್ಕಿಂತ ಕೈಲಾಸ ದೊಡ್ಡದಿರಲಾರದು ಎನಿಸಿತು."**

### ೩. ಕಾಣಿಕೆ ಕೊಡಲು ಆಸಕ್ತಿ ಇದೆ ಆದರೆ ಶಕ್ತಿ ಇಲ್ಲ:

ಪೂಜ್ಯರ ಅಮೃತಮಹೋತ್ಸವವನ್ನು ಆಚರಿಸುವ ನಿರ್ಣಯವನ್ನು ಡಿಸೆಂಬರ್ ೨೦೦೪ರ ಹಳೆಯ ವಿದ್ಯಾರ್ಥಿ ಹಾಗೂ ಹಿತೈಷಿಗಳ ಸಂಘದ ಸರ್ವಸದಸ್ಯರ ಸಾಮಾನ್ಯ ಸಭೆಯಲ್ಲಿ ನಿರ್ಣಯಿಸಿದ ವಿಚಾರ ಪತ್ರಿಕೆಯಲ್ಲಿ ಪ್ರಕಟವಾದುದ್ದನ್ನು ನೋಡಿ ಶ್ರೀಮಠದಲ್ಲಿ ಎಸ್‌ಎಸ್‌ಎಲ್‌ಸಿ ವರೆಗೆ ಓದಿದ ಬಡತನದಿಂದ ಬಡಗೀ ಕೆಲಸ ಮಾಡಿಕೊಂಡು ಬದುಕುತ್ತಿದ್ದ ಒಬ್ಬ ಹಳೆ ವಿದ್ಯಾರ್ಥಿ ಅಂತರಾಳದ ಅನಿಸಿಕೆಯನ್ನು ಅರಿಯಬೇಕಾದರೆ ಪೂಜ್ಯರಿಗೆ ಬರೆದ ಅರಿಕೆಯ ಪತ್ರವನ್ನು ಓದಿದಾಗ ಮಾತ್ರ ತಿಳಿಯಬಹುದಾಗಿದೆ. ಅದನ್ನೇ ಇಲ್ಲಿ ಕೊಡಲಾಗಿದೆ.

॥ ಶ್ರೀ ॥ 20/12/2004

ಸ್ವಾಮಿ

ಬುದ್ಧಿ ನಾನು ಶ್ರೀಮಠದಲ್ಲಿ S.S.L.C ಯವರೆಗೆ ವ್ಯಾಸಂಗ ಮಾಡಿ ಮುಂದಿನ ವ್ಯಾಸಂಗ ಮಾಡಲು ಅನುಕೂಲವಾಗಿರುವುದಿಲ್ಲವಾದ್ದರಿಂದ [illegible] ಈಗ ನಾನು ಬಡಗಿ ಕೆಲಸ ಮಾಡಿಕೊಂಡು ಜೀವಿಸುತ್ತಿದ್ದೇನೆ. ಆದರೂ ತಮ್ಮ ಅಮೃತ ಮಹೋತ್ಸವವನ್ನು ಆಚರಿಸಲು ನಿರ್ಧರಿಸಿರುವ ಹಣವನ್ನು ಕೊಡಲು ತುಂಬಾ ಆಸಕ್ತಿ ಇದ್ದರೂ ಶಕ್ತಿ ಇಲ್ಲದಾಗಿದೆ. ಆದ್ದರಿಂದ ಈಗ 500/- ರೂಗಳನ್ನು ಅಮೃತ ಮಹೋತ್ಸವಕ್ಕೆ ಸಲ್ಲಿಸಿಕೊಂಡು ನನ್ನನ್ನು ಕೃತಾರ್ಥನನ್ನಾಗಿ ಮಾಡಬೇಕೆಂದು ತಮ್ಮಲ್ಲಿ ಪ್ರಾರ್ಥಿಸಿಕೊಳ್ಳುತ್ತೇನೆ.

ಇಂತಿ ತಮ್ಮ ವಿಧೇಯ

Y. Ramaswamy

ಈ ಪತ್ರವನ್ನು ನೋಡಿದ ಪೂಜ್ಯರು ಎಷ್ಟು ಪ್ರಭಾವಿತರಾಗಿದ್ದರೆಂಬುದನ್ನು ಬರವಣಿಗೆಯಲ್ಲಿ ಮೂಡಿಸಲಾಗುವುದಿಲ್ಲ. ಅವನು ಕಳಿಸಿದ ೫೦೦/- ರೂಗಳನ್ನು ಕೈಯಲ್ಲಿ ಹಿಡಿದುಕೊಂಡಿದ್ದರು. ನನಗೆ ಓದಲು ಕೊಟ್ಟು ನೋಡು ಎಷ್ಟು ಸಂಸ್ಕಾರವಂತ ಎಂದರು. ಆ ಪತ್ರವನ್ನು ಪೂಜ್ಯರಿಗೆ ಕೇಳುವಂತೆ ಓದಿದೆ. ಓದುತ್ತಾ ಓದುತ್ತಾ ಹೃದಯ ತುಂಬಿ ಬಂದಿತ್ತು. ಕಣ್ಣಾಲಿಯಲ್ಲಿ ನೀರು ತುಂಬಿತ್ತು. ಆನಂತರ ಬಂದಂತ ೪-೫ ಜನರಿಗೆ ಓದಲು ಕೊಟ್ಟರು. ತಕ್ಷಣ ಅದಕ್ಕೆ ಪತ್ರ ಬರೆದರು. ಆ ಪೂಜ್ಯರ ಕೈಬರಹದ ಪತ್ರವನ್ನು ಸಹ ಕೊಡಲಾಗಿದೆ.

**ವೈ.ವಿ.ರಾಮಸ್ವಾಮಿಗೆ ಆಶಿಷಃ**

ನಿನ್ನ ಪತ್ರವು ಮತ್ತು ಅಮೃತಮಹೋತ್ಸವಕ್ಕೆ ನೀನು ಭಕ್ತಿಯಿಂದ ಕಳಿಸಿಕೊಟ್ಟ ೫೦೦ ರೂಗಳು ಮುಟ್ಟಿರುತ್ತವೆ. ಹೆಚ್ಚು ಕಾಣಿಕೆಯನ್ನು ಕೊಡಲು ಶಕ್ತಿ ಇಲ್ಲವೆಂದು ಚಿಂತಿಸಬೇಕಾಗಿಲ್ಲ. ಸಹಜವಾಗಿ ಭಕ್ತಿಯಿಂದ ನೀನು ಕಳಿಸಿರುವ ಕಾಣಿಕೆಯು ಅತ್ಯಂತ ಮಹತ್ವ ಉಳ್ಳದ್ದಾಗಿರುತ್ತದೆ. ನೀನು ಕಡಿಮೆಯವಧಿಯ ಶ್ರೀಮತದ ಜೀವನವನ್ನು ಸ್ಮರಿಸಿರುವುದು ವೇದ್ಯವಾಗಿ ಸಂತೋಷ ವಾಗಿರುತ್ತದೆ.

**ಇತ್ಯಾಶಿಷಃ**

**೪. ಕಷ್ಟವನ್ನು ಸಹಿಸುವ ಶಕ್ತಿಯನ್ನು ಮಠದಿಂದ ಕಲಿತೆ :**

ಕಾಶ್ಮೀರದ ಲೈನ್ ಆಫ್ ಕಂಟ್ರೋಲ್‌ನಲ್ಲಿ ಕೆಲಸ ಮಾಡುವ ಶ್ರೀಮಠದಲ್ಲಿ ಓದಿದ ಒಬ್ಬ ಹಳೆಯ ವಿದ್ಯಾರ್ಥಿ ೨೦೦೫ ಏಪ್ರಿಲ್ ತಿಂಗಳಿನಲ್ಲಿ ಪೂಜ್ಯರಿಗೆ ಬರೆದ ಪತ್ರವನ್ನು ಓದಿದಾಗ ಮಾತ್ರ ಶ್ರೀಮಠದ ಬಗ್ಗೆ ಅವನಿಗೆ ಇರುವ ಕೃತಜ್ಞತೆ ಮತ್ತು ಪೂಜ್ಯರ ಬಗ್ಗೆ ಇರುವ ಭಕ್ತಿಭಾವ ಮನವರಿಕೆಯಾ ಗುತ್ತದೆ. ಅವನ ಪತ್ರವನ್ನು ನೀವೇ ಓದಿ ತಿಳಿಯುವುದು.

ಓದುಗರ ಗಮನಕ್ಕಾಗಿ ಪೂಜ್ಯರಿಗೆ ಬರೆದ ಪತ್ರದ ಯಥಾ ನಕಲನ್ನು ಇಲ್ಲಿ ನೀಡಲಾಗಿದೆ.

ಹೀಗೆ ಪೂಜ್ಯರ ಮಾತೃಹೃದಯ ಸುಶಿಕ್ಷಿತ ಲಕ್ಷಾಂತರ ವಿದ್ಯಾರ್ಥಿಗಳನ್ನು ನಾಡಿಗೆ ನೀಡಿರುವುದು ಮನುಕುಲದ ಭಾಗ್ಯವೇ ಆಗಿದೆ. ಇಂತಹ ಪೂಜ್ಯರ ಸಾನ್ನಿಧ್ಯದಲ್ಲಿ ಕಲಿತ ವಿದ್ಯಾರ್ಥಿಗಳೆಲ್ಲರೂ ಧನ್ಯರು, ಪುಣ್ಯವಂತರು, ಭಾಗ್ಯವಂತರು. ಈ ಮೂಲಕ ಇವರು ಉತ್ತಮ ಸಂಸ್ಕಾರವಂತರಾಗಿ ಮಾನವತೆಗೆ ಮೆರಗು ತಂದಿರುತ್ತಾರೆ. ಹೀಗೆ ಲಕ್ಷಾಂತರ ವಿದ್ಯಾರ್ಥಿಗಳನ್ನು ಸಂಸ್ಕಾರವಂತರನ್ನಾಗಿ ಮಾಡಿದ ಮಹಾಸನ್ನಿಧಿಗೆ ಭಕ್ತಿಯ ನಮನಗಳು.



ನುಡಿನಮನ

# ಭರತ ಖಂಡದ ಮಹಾಬೆಳಗು

– ಬಿ.ಎಸ್. ಗವಿಮಠ *

ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ಭರತ ಖಂಡದ ಮಹಾಬೆಳಕು. ಆ ಬೆಳಕನ್ನು ಹಿಡಿದು ಹಾಕು ಎಂದರೆ ಹೇಗೆ ಸಾಧ್ಯ? ಅಂಥ ಕಾರ್ಯ ನಾನೀಗ ಮಾಡಬೇಕಿದೆ. ನೂರಾರು ಸ್ವಾಮಿಗಳು, ಸಂತರು, ಪೀಠಾಧಿಪತಿಗಳು, ಮಠಾಧಿಪತಿಗಳನ್ನು ಕಂಡಿದ್ದೇನೆ. ನೂರಾರು ಸ್ವಾಮಿಗಳಲ್ಲಿ ಹತ್ತಾರು ಜನರನ್ನು ಮೆಚ್ಚಿ ನಮಿಸಿದ್ದೇನೆ. ಘಟದಿಂದ ಮಠ ಬೆಳಗಬೇಕು. ಮಠದಿಂದ ಘಟ ಬೆಳಗಬಾರದು. ಅಥಣಿ ಶಿವಯೋಗಿಗಳು, ಧಾರವಾಡ ಮೃತ್ಯುಂಜಯ ಅಪ್ಪಗಳು, ಮುರಗೋಡ ಮಹಾಂತ ಅಪ್ಪಗಳು, ನಾಗನೂರು ರುದ್ರಾಕ್ಷಿ ಮಠದ ಲಿಂ. ಡಾ. ಶಿವಬಸವ ಸ್ವಾಮೀಜಿ ಅವರಂಥ ಕೆಲವು ಪೂಜ್ಯರಿಗೆ ತಲೆ ತನ್ನಷ್ಟಕ್ಕೆ ತಾನೇ ಬಾಗುತ್ತದೆ. ಇಂಥ ಸ್ವಾಮಿಗಳ ಕುಲಕ್ಕೆ ಆದರ್ಶಪ್ರಾಯರಾಗಿ ನೂರಕ್ಕೂ ಅಧಿಕ ವರ್ಷಗಳ ಕಾಲ ಕರ್ನಾಟಕ, ಕನ್ನಡಿಗರು ಹೆಮ್ಮೆಯಿಂದ ಬೀಗುವಂತೆ, ಗೌರವದಿಂದ ಬಾಗುವಂತೆ ಮಾಡಿದ ಪುಣ್ಯಪುರುಷ ಡಾ. ಶ್ರೀ ಶಿವಕುಮಾರ ಸ್ವಾಮೀಜಿ.

೧೧೧ ವರ್ಷಗಳಾದರೂ ವಯೋಸಹಜ ಬಳಲಿಕೆಗಳಿಲ್ಲದೆ, ಕಾಯಕ ಯೋಗಿಯಾಗಿ ಜಾತಿ, ಮತ-ಪಂಥಗಳ ಆಚೆ ನಿಂತು ಯೋಚಿಸುವ ಮಹಾಮಾನವತಾವಾದಿ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ. ಇಂದಿನ ಕೆಲವು ಸ್ವಾಮಿಗಳಿಗೆ ಚರಿತ್ರೆಯೂ ಇಲ್ಲ ಚಾರಿತ್ರ್ಯವೂ ಇಲ್ಲ. ಸ್ವಾಮಿಗಳು, ಮಠಾಧೀಶರ ಕುರಿತು ನಂಬಿಕೆ ಕಳೆದು ಹೋಗುತ್ತಿದೆ. ಮಠಗಳತ್ತ ಅನುಮಾನದಿಂದಲೇ ನೋಡಬೇಕಾಗಿರುವ ಇಂದಿನ ದಿನಗಳಲ್ಲಿ ಸಿದ್ಧಗಂಗೆಯ ಸಿದ್ಧಪುರುಷ ಮತ್ತೆ ನಮ್ಮಲ್ಲಿ ಭರವಸೆಯ ಬೆಳಕಾಗಿ ಗೋಚರಿಸುತ್ತಾರೆ. ದೀನ-ದಲಿತರಿಗಾಗಿ ಮರುಗುವವರು, ಕಟ್ಟ ಕಡೆಯ ವ್ಯಕ್ತಿಯ ಕಣ್ಣೊರೆಸುವವರೇ ನಿಜವಾದ ಮಹಾತ್ಮರು. ಅಂಥವರನ್ನು ನಾವು ಕಂಡಿದ್ದೇ ಡಾ. ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿಯಲ್ಲಿ. ಅವರ ನೇತೃತ್ವದಲ್ಲಿ ನಡೆಯುತ್ತಿರುವ ಸಿದ್ಧಗಂಗಾ ಮಠದಲ್ಲಿ ಸಮಸ್ತ ವರ್ಗಗಳ ವಿದ್ಯಾರ್ಥಿಗಳನ್ನು ನಾವು ಕಾಣಬಹುದು. ಯಾವುದೇ ಭೇದ-ಭಾವವಿಲ್ಲದೇ ಸಮನಾಗಿ ನೆತ್ತಿಗೆ ಜ್ಞಾನ, ಹೊಟ್ಟೆಗೆ ಅನ್ನ ನೀಡುತ್ತ ಬಂದಿರುವುದು ಶ್ರೀಗಳ ಜಾತ್ಯಾತೀತ ನಿಲುವಿಗೆ ಸಾಕ್ಷಿ.

ಪ್ರತಿವರ್ಷ ೧೦ ಸಾವಿರ ವಿದ್ಯಾರ್ಥಿಗಳು ಸಿದ್ಧಗಂಗೆ ಮಡಿಲಲ್ಲಿ ನಿರಾತಂಕವಾಗಿ, ನಿರುಮ್ಮಳವಾಗಿದ್ದು ಶಿಕ್ಷಣ ಪಡೆದು ಉನ್ನತ ಹುದ್ದೆಗಳನ್ನು ಅಲಂಕರಿಸಿ ಸಮಾಜದ ಆಸ್ತಿಯಾಗಿರುವುದು ಪವಾಡವಲ್ಲದೇ ಮತ್ತೇನು ? ೮೦ ವರ್ಷಗಳ ಕಾಲ ಲಕ್ಷಾಂತರ ವಿದ್ಯಾರ್ಥಿಗಳಿಗೆ ತಂದೆಯ ರಕ್ಷಣೆ, ತಾಯಿಯ ಮಮತೆ ಉಣಬಡಿಸಿದ ದೇವಮಾನವ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ ನಮ್ಮ ನಾಡಿನ ಆಸ್ತಿ. ಅವರನ್ನು ಕಣ್ತುಂಬ, ಮನದುಂಬಿಕೊಳ್ಳುವುದೇ ಒಂದು ಹಬ್ಬ. ಕರ್ನಾಟಕದಾದ್ಯಂತ ಸಂಚರಿಸಿ, ರಾಜ್ಯದ ಮಹಾಜನತೆಯ ಆರಾಧ್ಯದೈವ ಎನಿಸಿರುವ ಶ್ರೀಗಳು, ಪ್ರತಿ ಊರಿನವರಿಗೂ ಬೇಕೆನಿಸುತ್ತಾರೆ. ಇವರಿಗೆ ಪ್ರತಿ ಊರಿನವರು ಕ್ಷಣದಲ್ಲೇ ಅಪ್ಪರಾಗಿಬಿಡುತ್ತಾರೆ.

ಸಿದ್ಧಗಂಗಾ ಕ್ಷೇತ್ರದ ಪ್ರಾಚೀನ ಗುರುಕುಲ, ಆಧುನಿಕ ಕಾಲದ ವಿಶ್ವವಿದ್ಯಾಲಯಗಳ ಮಾದರಿ ಮೇಳೈಸಿಕೊಂಡು ವಿದ್ಯಾಕೇಂದ್ರದ ಜತೆಗೆ ಆಧ್ಯಾತ್ಮ ಕೇಂದ್ರವೆನಿಸಿದೆ. ಸದ್ದುಗದ್ದಲವಿರದ ಸಾಧನೆಯೇ ಇಲ್ಲಿ ಗದ್ದುಗೆಗೇರಿದೆ. ಕಾಯಕವೇ ಕೈಲಾಸ ಎಂಬ ಮಾತು ಕೃತಿಯಲ್ಲಾಗಿದೆ. ಕಾಯಕ ಮಾಡಿದರೆ ಕೈ 'ಲಾಸ' ಆಗುತ್ತದೆ ಎನ್ನುವ ಈಗಿನ ದಿನಗಳಲ್ಲಿ ಕಾಯಕದಿಂದಲೇ ಕೈಲಾಸ ಪ್ರಾಪ್ತಿ ಎನ್ನುವುದನ್ನು ತೋರಿಸಿಕೊಟ್ಟವರು ಸಿದ್ಧಗಂಗೆಯ ಸಿದ್ಧಿಪುರುಷ ಶ್ರೀ ಶ್ರೀ ಶಿವಕುಮಾರ ಸ್ವಾಮೀಜಿ.

೮೮ ವರ್ಷಗಳ ಕಾಲ ಅಖಂಡವಾಗಿ ಒಂದು ಪೀಠದ ಅಧಿಪತಿಯಾಗಿ ಒಂದಿನಿತು ಚ್ಯುತಿ ಬಾರದ ಹಾಗೆ ನಡೆದುಕೊಂಡು ಜನಸಾಮಾನ್ಯರ ಹೃದಯ ಸಿಂಹಾಸನಗಳಲ್ಲಿ ನೆಲೆಸಿರುವ ಶ್ರೀಗಳು, ಬದುಕಿರುವಾಗಲೇ ದಂತಕಥೆಯಾದವರು. ದೀನ-ದಲಿತರ, ಹಳ್ಳಿಗಾಡಿನ ಜನರ ಬದುಕನ್ನು ಎತ್ತರಿಸಲು ಅವರ ಜೀವ ಹಣ್ಣಾಗಿದೆ. ಅವರ ಕೃಪಾಕಟಾಕ್ಷಕ್ಕೆ ಪಾತ್ರರಾದವರೆಲ್ಲ ಉದ್ಧಾರವಾಗಿದ್ದಾರೆ. ಶ್ರೀಗಳು ಹಳ್ಳಿಗರ ಕಣ್ಣಾಗಿದ್ದಾರೆ. ಸಿದ್ಧಗಂಗೆಯಲ್ಲಿ ಮೌನ ಸಾಮಾಜಿಕ ಕ್ರಾಂತಿಯೇ ನಡೆದಿದೆ. ಜಾತೀಯತೆ ಹೇಗೆ ಹೋಗಲಾಡಿಸಲು ಸಾಧ್ಯ ಎಂಬುದನ್ನು ಶ್ರೀಗಳು ತೋರಿಸಿಕೊಟ್ಟು ಯುಗಪ್ರವರ್ತಕರೆನಿಸಿದ್ದಾರೆ. ಈ ದೇವ ಕುಸುಮ ಕನ್ನಡ ನಾಡಿನಲ್ಲಿ ಅರಳಿದ್ದು, ಬೆಳಗಿದ್ದು ಕನ್ನಡಿಗರ ಪುಣ್ಯವೇ ಸರಿ ಎಂದು ಜಗದ್ಗುರು ಶ್ರೀ ಬಾಲಗಂಗಾಧರನಾಥ ಸ್ವಾಮೀಜಿ ನುಡಿದಿರುವುದು ನೂರಕ್ಕೆ ನೂರರಷ್ಟು ನಿಜ !

* ನಿರ್ದೇಶಕರು, ಪ್ರಸಾರಾಂಗ, ಕೆಎಲ್‌ಇ ಸಂಸ್ಥೆ, ಬೆಳಗಾವಿ

ನುಡಿನಮನ

# ಅವರ ಸ್ಮರಣೆಯಲ್ಲೇ ನನ್ನ ನಿತ್ಯದ ಊಟ

– ಗೋವಿಂದರಾಜು *

ಸಿದ್ಧಗಂಗಾ ಶ್ರೀಗಳು ಎಲ್ಲ ಸಮುದಾಯದ ಬಡವರಿಗೆ ಆದ್ಯತೆ ಕೊಟ್ಟವರು. ಗುರುಗಳ ಆಶೀರ್ವಾದವಿರದಿದ್ದರೆ ನಾನು ಇವತ್ತಿಗೂ ಕೂಲಿ ಕೆಲಸ ಮಾಡುತ್ತಿರುತ್ತಿದ್ದೆ. ಅಂದು ಅವರು ಮಾಡಿದ ನೆರವಿಗೆ ಇಂದಿಗೂ ಅವರ ಸ್ಮರಣೆಯಲ್ಲೇ ಊಟ ಮಾಡುತ್ತಿರುವೆ.

ನಾನು ಐದನೇ ತರಗತಿಗೆ ಮಠಕ್ಕೆ ಸೇರಿದೆ. ಆಗ ನಾಲ್ಕೈದು ಸಾವಿರ ವಿದ್ಯಾರ್ಥಿಗಳಿದ್ರು. ಆಗೆಲ್ಲ ಸ್ವಾಮೀಜಿಯವರೇ ಖುದ್ದಾಗಿ ಗಂಜಿ ಬಡಿಸ್ತಾ ಇದ್ರು. ಅಪ್ಪ-ಅಮ್ಮನೂ ತೋರದ ಪ್ರೀತಿಯನ್ನು ಸ್ವಾಮೀಜಿಯವರಿಂದ ಉಂಡಿದ್ದೇವೆ. ಮಕ್ಕಳಿಗೆ ಇಂಗ್ಲೀಷ್-ಗಣಿತ ಕಷ್ಟ ಎಂಬುದನ್ನು ಅರಿತಿದ್ದ ಸ್ವಾಮೀಜಿ ನಿತ್ಯ ಎಸ್ಸೆಸ್ಸೆಲ್ಸಿ ಮಕ್ಕಳಿಗೆ ಪಾಠ ಮಾಡ್ತಿದ್ರು. ಅವರು ಅಂದು ಹೇಳುತ್ತಿದ್ದ ಪಾಠ, ವ್ಯಾಕರಣ ಈಗಲೂ ನೆನಪಾಗಿರುತ್ತೆ. ನನ್ನನ್ನು ಒಳ್ಳೆಯ ಭಾಷಣಕಾರ ಅಂತಾರೆ. ಆದರೆ ಸ್ವಾಮೀಜಿ ಎದುರು ನಿಂತ್ರೆ ಈಗಲೂ ನಡುಕ ಶುರುವಾಗುತ್ತದೆ.

ಟೆಲಿಕಾಂ ಸಂಸ್ಥೆಯಲ್ಲಿದ್ದಾಗ ಪ್ರತಿ ಭಾನುವಾರ ಶ್ರೀಗಳ ದರ್ಶನಕ್ಕೆ ಹೋಗ್ತಾ ಇದ್ದೆ. ನನ್ನ ಸೀನಿಯರ್ ಅಕ್ಕನ ಮಗನಿಗೆ ಇಂಜಿನಿಯರಿಂಗ್ ಸೀಟ್ ಕೇಳಲು ಮಠಕ್ಕೆ ನನ್ನನ್ನೂ ಕರೆದೊಯ್ದಿದ್ರು. ಡೊನೇಷನ್ ಎಷ್ಟಾದ್ರೂ ಪರವಾಗಿಲ್ಲ. ನನಗೆ ಸೀಟ್ ಬೇಕೇಬೇಕು ಅಂತಾ ಸ್ವಾಮೀಜಿ ಬಳಿ ಪಟ್ಟುಹಿಡಿದ್ರು ನನ್ನ ಸೀನಿಯರ್. ಅಷ್ಟಾದ್ರೂ ಸ್ವಾಮೀಜಿ ಏನೂ ಮಾತನಾಡದೆ ನನ್ನನ್ನು ಕರೆದು ಒಂದು ಪೋಸ್ಟ್‌ಕಾರ್ಡ್ ಕೊಟ್ಟು ಓದು ಅಂದ್ರು. ಅದ್ರಲ್ಲಿ ಅತಿ ಹಿಂದುಳಿದ ವರ್ಗಕ್ಕೆ ಸೇರಿದ ಹುಡುಗನೊಬ್ಬ ತನಗೆ ಓದುವ ಆಸೆಯಿದೆ. ಆದ್ರೆ ಕಿತ್ತು ತಿನ್ನುವ ಬಡತನ. ನಿಮ್ಮನ್ನು ಭೇಟಿ ಮಾಡೋದಕ್ಕೆ ಅಂತಾ ಬರೋದಕ್ಕೂ ಬಸ್ಸಿಗೆ ನನ್ನ ಬಳಿ ದುಡ್ಡಿಲ್ಲ ಎಂದು ಬರೆದಿದ್ದ. ಅದಕ್ಕೆ ಸ್ವಾಮೀಜಿಯವರೇ ಆತನಿಗೆ ಹಣ ಕಳಿಸಿದ್ದರು. ಅದರ ರಸೀತಿಯನ್ನೂ ತೋರಿಸಿದರು. ನೋಡಿ, ನೀವು ಶ್ರೀಮಂತರು. ಎಷ್ಟಾದರೂ ಡೊನೇಷನ್ ಕೊಡ್ತೀನಿ ಅಂತೀರಿ. ಈತ ತೀರಾ ಬಡವ, ಹೀಗಾಗಿ ಇರುವ ಒಂದು ಸೀಟು ಈತನಿಗೇ ಮೀಸಲು. ಆತ ಬರದಿದ್ದರೆ ನಿಮಗೆ ಕೊಡುವೆ ಎಂದು ಹೇಳಿದ್ದು ಶ್ರೀಗಳಿಗೆ ಬಡವರ ಬಗೆಗಿದ್ದ ಕಾಳಜಿ ತೋರಿಸಿತು.

ನಾನು ತುಮಕೂರು ಜಿಲ್ಲಾ ಪಂಚಾಯಿತಿ ಸಿಇಒ ಆಗಿದ್ದಾಗಿನ ಮಾತು. ಒಮ್ಮೆ ದರ್ಶನಕ್ಕೆ ಹೋಗಿದ್ದೆ. ಮಠದಲ್ಲಿ ಪ್ರವೇಶ ಪಡೆದಿರುವ ಉತ್ತರ ಕರ್ನಾಟಕದ ಮಕ್ಕಳು ವಿದ್ಯೆಯಲ್ಲಿ ಹಿಂದಿದ್ದಾರೆ. ಅವರನ್ನು ಈಗಲೇ ವಾಪಸ್ ಕಳಿಸಿಬಿಡೋಣ, ಇಲ್ಲದಿದ್ದರೆ ಒಟ್ಟಾರೆ ಫಲಿತಾಂಶಕ್ಕೆ ತೊಂದರೆಯಾಗುತ್ತದೆ ಎಂದು ಮಠದ ಶಿಕ್ಷಣ ವಿಭಾಗದ ಸಿಬ್ಬಂದಿ ಹೇಳ್ತಿದ್ರು. ಅದಕ್ಕೆ ಸ್ವಾಮೀಜಿ, ಏನಾದರೂ ಆಗಲಿ ಅವರನ್ನೂ ಈಗಲೇ ಕಳಿಸಿದ್ರೆ ಕಷ್ಟ ಆಗತ್ತೆ. ಈ ವರ್ಷ ಮುಗಿಯಲಿ ಮುಂದಿನ ವರ್ಷ ಈ ಬಗ್ಗೆ ಯೋಚನೆ ಮಾಡೋಣ ಅಂದ್ಬಿಟ್ರು.

ಒಮ್ಮೆ ಮಠದ ಸುತ್ತಲಿನ ರಸ್ತೆಗಳಿಗೆ ಟಾರ್ ಹಾಕಿಸ್ತಾ ಇದ್ದೆ. ನನಗೆ ಪಾಠ ಮಾಡಿದ್ದ ಗುರುಗಳು ಆಗ ಹೆಡ್‌ಮಾಸ್ಟರ್ ಆಗಿದ್ರು. ಅವರು ಬಂದು ಈ ಮೈದಾನಕ್ಕೂ ಟಾರ್ ಹಾಕಿಸಬಹುದಾ ಅಂತಾ ಕೇಳಿದ್ರು. ಅಯ್ಯೋ ಗುರುಗಳೇ ಅದ್ಕೇನಂತೆ, ಹಾಕಿಸ್ತೀನಿ ಇರಿ ಎಂದು ಅಲ್ಲೇ ಇದ್ದ ಸಿಬ್ಬಂದಿಗೆ ಸೂಚಿಸಿದೆ. ಎರಡೇ ದಿನದಲ್ಲಿ ಸಿಬ್ಬಂದಿ ಚೆನ್ನಾಗಿಯೇ ಟಾರ್ ಹಾಕಿಸಿದ್ರು. ಮೂರ್ ದಿನ ಬಿಟ್ಟು ಹೆಡ್‌ಮಾಸ್ಟರ್ ನನ್ನ ಮನೆಗೇ ಬಂದು, ಮೈದಾನಕ್ಕೆ ಟಾರ್ ಹಾಕಿಸಿರೋದು ಬುದ್ಧಿಯವ್ರಿಗೆ ಇಷ್ಟ ಆಗಿಲ್ಲ. ಹೀಗಾಗಿ ನೀವೇ ಬಂದು ಸರಿಮಾಡಬೇಕು ಎಂದರು. ನಾನು ಹೋದಾಗ, ಎಲ್ಲರನ್ನೂ ಕರೆದು 'ಇವನು ಮಠದ ವಿದ್ಯಾರ್ಥಿ. ಮಠದ ಬಗ್ಗೆ ಭಾರಿ ಗೌರವ. ಹೀಗಾಗಿ ಏನ್ ಹೇಳಿದ್ರೂ ಮಾಡ್ತಾನೆ. ಆದರೆ ಅವನನ್ನು, ಅವನ ಅಧಿಕಾರವನ್ನು ನಾವು ದುರ್ಬಳಕೆ ಮಾಡಿಕೊಳ್ಳಬಾರದು' ಎಂದು ಹೇಳಿದ್ದನ್ನು ಮರೆಯಲಾಗದು.

ಸ್ವಾಮೀಜಿ ಹೇಳಿದಂತೆ ನಾನು ಮಠಕ್ಕೆ ಅಂದ್ರೆ ಏನ್ ಬೇಕಾದ್ರೂ ಮಾಡ್ತೀನಿ. ಕೆಲಸ ಹೋದ್ರೂ ಪರವಾಗಿಲ್ಲ. ಮಠದ ಸೇವಕನಾಗಿ ಇದ್ದುಬಿಡುತ್ತೇನೆ.

* ನಿರ್ದೇಶಕರು, ಅಂಗವಿಕಲರ ಕಲ್ಯಾಣ ಇಲಾಖೆ



ಸಾಂದರ್ಭಿಕ

# ದಾರ್ಶನಿಕ ಕವಿ ಡಾ. ಸಿದ್ಧಯ್ಯ ಪುರಾಣಿಕರು

– ಎಚ್.ಎಸ್. ಸಿದ್ಧಗಂಗಪ್ಪ *



ಬಾಲ್ಯ – 'ಹಣ್ಣು, ಹಣ್ಣು' ಎಂದಿತು
ತಾರುಣ್ಯ – 'ಹೆಣ್ಣು ಹೆಣ್ಣು' ಎಂದಿತು
ವಾರ್ಧಕ್ಯ – 'ಹೊನ್ನು ಹೊನ್ನು' ಎಂದಿತು
ಮುಪ್ಪು – 'ಮಣ್ಣು ಮಣ್ಣು' ಎಂದಿತು
ಇದುವರೆಗು ನೀನು ತುಳಿದೆ ಮಣ್ಣನ್ನು
ಇನ್ನೇನು ಮಣ್ಣು ತುಳಿಯಲಿದೆ ನಿನ್ನನ್ನು'

ದಾರ್ಶನಿಕ ಕವಿ ಡಾ. ಸಿದ್ಧಯ್ಯ ಪುರಾಣಿಕರು ಈ ಆರು ಸಾಲಿನ ಪುಟ್ಟ ಕವನದಲ್ಲಿ ಇಡೀ ಬದುಕಿನ ಚಿತ್ರಣವನ್ನು ಸರಳವಾಗಿ ಅರ್ಥಪೂರ್ಣವಾಗಿ ಮನಮುಟ್ಟುವಂತೆ ಪರಿಚಯ ಮಾಡಿಕೊಟ್ಟಿದ್ದಾರೆ. ಕವಿಯಾಗಿ, ಅಧುನಿಕ ವಚನಕಾರರಾಗಿ, ಕಾದಂಬರಿಕಾರರಾಗಿ, ನಾಟಕಕಾರರಾಗಿ, ಮಕ್ಕಳ ಸಾಹಿತ್ಯ ರಚನೆಕಾರರಾಗಿ, ವಿಮರ್ಶಕರಾಗಿ, ಇತಿಹಾಸಕಾರರಾಗಿ, ಕತೆಗಾರರಾಗಿ, ಹಲವಾರು ಮೌಲಿಕ ಕೃತಿಗಳನ್ನು ರಚಿಸಿ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿ ಪ್ರಸಿದ್ಧರಾಗಿದ್ದಾರೆ. ದಕ್ಷ ಅಧಿಕಾರಿಯಾಗಿ ತಾವು ವಹಿಸಿಕೊಂಡ ಹುದ್ದೆಗಳಿಗೆ ಘನತೆ, ಗೌರವವನ್ನು ತಂದುಕೊಟ್ಟಿದ್ದರು. ಶ್ರದ್ಧೆ, ಕರ್ತವ್ಯ ನಿಷ್ಠೆ, ಮಾನವೀಯತೆ, ಅನುಕಂಪ, ಬಡವರ ಬಗ್ಗೆ ಕಾಳಜಿಯಿಂದ ಒಬ್ಬ ದಕ್ಷ ಜನಾನುರಾಗಿ ಆಡಳಿತಗಾರರೆಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದರು. ಬಸವಣ್ಣನವರ ಆದರ್ಶ, ಮಾನವೀಯ ಗುಣಗಳನ್ನು ಮೈಗೂಡಿಸಿಕೊಂಡು ಜೀವನದುದ್ದಕ್ಕೂ ಆಚರಣೆಗೆ ತಂದ ಅಪ್ಪಟ ಬಸವಾಭಿಮಾನಿಗಳಾಗಿದ್ದರು. ನಾಡು-ನುಡಿಯ ಬಗ್ಗೆ ಅಪಾರವಾದ ಅಭಿಮಾನವುಳ್ಳವರಾಗಿದ್ದರು.

**ಜನನ :** ಹುಟ್ಟಿದ ಊರು ರಾಯಚೂರು ಜಿಲ್ಲೆಯ ಯಲಬುರುಗಿ ತಾಲ್ಲೂಕಿನ ರ‍್ಯಾಂಪುರದಲ್ಲಿ. ಹುಟ್ಟಿದ ವರ್ಷ, ಜೂನ್ ೧೮, ೧೯೧೮, ಹಡೆದ ಪುಣ್ಯಜೀವಿಗಳು ತಂದೆ ಶರಣ ಕಲ್ಲಿನಾಥ ಶಾಸ್ತ್ರೀಯವರು, ತಾಯಿ ಶರಣೆ ದಾನಮ್ಮನವರು. ಬಸವಾದಿ ಶರಣರ ಆದರ್ಶಗಳನ್ನು ಮೈಗೂಡಿಸಿಕೊಂಡಿದ್ದ ಸುಸಂಸ್ಕೃತ ಕುಟುಂಬ. ಅತಿಥಿ ಸತ್ಕಾರ ಅವರ ಜೀವನದ ಭಾಗವಾಗಿತ್ತು. ಬಿ.ಎ. ಪರೀಕ್ಷೆಯಲ್ಲಿ ಪ್ರಥಮ ಸ್ಥಾನ ಪಡೆದ ಪ್ರತಿಭಾವಂತರು. ಡಾ. ಸಿದ್ಧಯ್ಯ ಪುರಾಣಿಕರ ಸಹೋದರರು ಶ್ರೀ ಅನ್ನದಾನಯ್ಯ ಪುರಾಣಿಕ. ಪ್ರೊ. ಬಸವರಾಜ ಪುರಾಣಿಕ್ ಅವರು ಸಾಹಿತ್ಯ ಕ್ಷೇತ್ರದಲ್ಲಿ ಚಿರಪರಿಚಿತರಾಗಿದ್ದರು. ಹಲವಾರು ಕೃತಿಗಳನ್ನು ನೀಡುವುದರ ಮೂಲಕ ಸಾಹಿತ್ಯ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದರು.

**ವೃತ್ತಿ :** ಕಂದಾಯ ಇಲಾಖೆಯಲ್ಲಿ ತಹಸೀಲ್ದಾರ ಆಗಿ ವೃತ್ತಿ ಜೀವನವನ್ನು ಪ್ರಾರಂಭಿಸಿದ ಡಾ. ಸಿದ್ಧಯ್ಯ ಪುರಾಣಿಕರು ಅಸಿಸ್ಟೆಂಟ್ ಕಲೆಕ್ಟರ್, ಅಸಿಸ್ಟೆಂಟ್ ಕಮೀಷನರ್, ಅಸಿಸ್ಟೆಂಟ್ ರೆವಿನ್ಯೂ ಸೆಕ್ರೆಟರಿ, ಸ್ಥಾನಿಕ ಸ್ವರಾಜ್ಯ ಆಡಳಿತ ಸಚಿವರ ಕಾರ್ಯದರ್ಶಿ, ಕೃಷಿ ಯೋಜನೆ, ಹಾಗೂ ಪೂರೈಕೆ ಇಲಾಖೆಯ ಸಚಿವರ ಕಾರ್ಯದರ್ಶಿ, ಡೆಪ್ಯೂಟಿ ಕಲೆಕ್ಟರ್, ಹೀಗೆ ನಾನಾ

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು-೯೧ ಮೊ: ೯೮೪೫೫ ೬೫೮೬೧







ಹುದ್ದೆಗಳಲ್ಲಿ ಶ್ರದ್ಧೆ, ನಿಷ್ಠೆ, ಪ್ರಾಮಾಣಿಕತೆ, ದಕ್ಷತೆಯಿಂದ ಸೇವೆ ಸಲ್ಲಿಸಿದ ಶ್ರೀಯುತರು ೧೯೫೮ ರಲ್ಲಿ ಭಾರತೀಯ ನಾಗರಿಕ ಆಡಳಿತ ಸೇವೆಗೆ ಸೇರ್ಪಡೆಯಾದರು. ನಂತರ ಶಿಕ್ಷಣ ಇಲಾಖೆಯಲ್ಲಿ ಉಪಕಾರ್ಯದರ್ಶಿಯಾಗಿ, ವಾರ್ತಾ ಮತ್ತು ಪ್ರವಾಸೋದ್ಯಮ ಇಲಾಖೆಯ ನಿರ್ದೇಶಕರಾಗಿ ಆರ್ಥಿಕ ಇಲಾಖೆಯಲ್ಲಿ ಡೆಪ್ಯೂಟಿ ಸೆಕ್ರೆಟರಿಯಾಗಿ, ಮಡಿಕೇರಿ ಹಾಗೂ ಬೆಳಗಾವಿ ಜಿಲ್ಲೆಯ ಜಿಲ್ಲಾಧಿಕಾರಿಯಾಗಿ ಬಡವರ, ರೈತರ ಸಮಸ್ಯೆಗಳಿಗೆ ಸ್ಪಂದಿಸಿ, ನ್ಯಾಯ ದೊರಕಿಸಿಕೊಟ್ಟ ತೃಪ್ತಿ, ಸಂತೋಷ, ನೆಮ್ಮದಿ ಅವರದಾಗಿತ್ತು. ಲೇಬರ್ ಕಮೀಷನರ್ ಆಗಿ ಪದೋನ್ನತಿ ಹೊಂದಿ, ಕಾರ್ಮಿಕರ ಬಹುಕಾಲದಿಂದಲೂ ನೆನಗುದಿಗೆ ಬಿದ್ದಿದ್ದ ಸಮಸ್ಯೆಗಳನ್ನು ಬಗೆಹರಿಸಿ, ಅವರ ನ್ಯಾಯ ಸಮ್ಮತವಾದ ಬೇಡಿಕೆಗಳನ್ನು ಈಡೇರಿಸಿ ಕಾರ್ಮಿಕ ವರ್ಗದವರ ಪ್ರೀತಿ, ಗೌರವಗಳಿಗೆ ಪಾತ್ರರಾದರು. ೩೩ ವರ್ಷಗಳ ಕಾಲ ಸೇವೆ ಸಲ್ಲಿಸಿ ಜೂನ್ ೧೯೭೬ ರಲ್ಲಿ ಸರ್ಕಾರಿ ಸೇವೆಯಿಂದ ನಿವೃತ್ತಿ ಹೊಂದಿದರು. ತಮ್ಮ ಸೇವಾವಧಿಯಲ್ಲಿ ಎಂದೂ ಅಧಿಕಾರಿ ಎಂಬ ದರ್ಪ ತೋರಲಿಲ್ಲ. ಅಧಿಕಾರ ಜನರ ಸೇವೆ ಮಾಡಲು ದೊರೆತ ಸುವರ್ಣಾವಕಾಶ, ಸೌಭಾಗ್ಯ ಎಂದು ಭಾವಿಸಿದ್ದರು. ಅವರೆಂದೂ ಅಧಿಕಾರಿ ಎಂದು ಬೀಗಲಿಲ್ಲ. ಶರಣರ ಬದುಕು, ಸಾಧನೆ, ಸಿದ್ಧಿಗಳನ್ನು ಚಿಕ್ಕಂದಿನಿಂದಲೇ ಅರ್ಥಮಾಡಿಕೊಂಡು ಮೈಗೂಡಿಸಿ ಕೊಂಡಿದ್ದ ಶ್ರೀಯುತರು ಆಕಾಶದಲ್ಲಿ ತಲೆ ಎತ್ತಿ ಬೀಗುವ ತೆಂಗಾಗಲಿಲ್ಲ, ಭೂಮಿತಾಯಿಗೆ ತಲೆಬಾಗಿ ನಮಿಸುವ ಬಾಳೆಯಾದರು. ಅವರ ಮಾನವತೆಯ ಮೇಲೆ ಮಂದಾರವಾಗಿ ಅರಳಿದರು.

ದೊಡ್ಡ ಅಧಿಕಾರಿಯಾಗಿದ್ದರು ಸರಳತೆ, ಸಜ್ಜನಿಕೆಯ ಸಾಕಾರ ಮೂರ್ತಿಯಾಗಿದ್ದರು. ಚಿಕ್ಕವರೊಡನೆ ನಡೆದುಕೊಳ್ಳುತ್ತಿದ್ದ ರೀತಿ ಅವಿಸ್ಮರಣೀಯವಾದವು. ನಾನು ಕನ್ನಡ ಸಾಹಿತ್ಯ ಪರಿಷತ್ತಿನ ಜಾನಪದ ವಿಭಾಗದ ಮುಖ್ಯಸ್ಥನಾಗಿ, ರಾಜ್ಯ ಸಂಚಾಲಕನಾಗಿ ಸೇವೆ ಸಲ್ಲಿಸುತ್ತಿದ್ದಾಗ ಜಿಲ್ಲಾ ಜನಪದ ಕಲಾ ಮೇಳಗಳನ್ನು ವ್ಯವಸ್ಥೆ ಮಾಡುವ ಹೊಣೆಗಾರಿಕೆ ನನ್ನದಾಗಿತ್ತು. ಬೆಳಗಾವಿ, ರಾಯಚೂರು, ಬಿಜಾಪುರ ಜಿಲ್ಲೆಗಳಲ್ಲಿ ನಡೆದ ಕಲಾಮೇಳದಲ್ಲಿ ಡಾ. ಸಿದ್ಧಯ್ಯ ಪುರಾಣಿಕರು ಅತಿಥಿಗಳಾಗಿ ಭಾಗವಹಿಸಿದ್ದರು. ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಶ್ರೀ ಜಿ. ನಾರಾಯಣ, ಡಾ. ಎಚ್.ಎಲ್. ನಾಗೇಗೌಡ, ಡಾ. ಸಿದ್ಧಯ್ಯ ಪುರಾಣಿಕರೊಡನೆ ಪ್ರಯಾಣ ಮಾಡುವ ಸದಾವಕಾಶ ನನ್ನದಾಗಿತ್ತು. ಆಗ ಅವರು ನನ್ನ ಬರವಣಿಗೆ, ಕೆಲಸದ ಬಗ್ಗೆ ಮೆಚ್ಚುಗೆ ಮಾತನಾಡಿ, ಪ್ರೋತ್ಸಾಹಿಸುತ್ತಿದ್ದುದ್ದು ಇನ್ನು ನನ್ನ ಮನಸ್ಸಿನಲ್ಲಿ ಹಚ್ಚ ಹಸಿರಾಗಿದೆ. ಅವರು ಮಾತನಾಡುತ್ತಿದ್ದರೆ ಜೇನಿನ ಹೊಳೆಯೇ ಹರಿದಂತೆ ಭಾಸವಾಗುತ್ತಿತ್ತು. ಯಾರ ಮನಸ್ಸನ್ನು ನೋಯಿಸದ ಮೃದುವಾದ ಮಾತುಗಳು ಅಪ್ಯಾಯಮಾನವಾಗಿತ್ತು.

**ಕುಟುಂಬ** : ತಮ್ಮ ೨೫ನೇ ವಯಸ್ಸಿನಲ್ಲಿಯೇ ಗಿರಿಜಾದೇವಿಯವರನ್ನು ಕೈಹಿಡಿಯುವುದರ ಮೂಲಕ ದಾಂಪತ್ಯ ಜೀವನಕ್ಕೆ ಪಾದಾರ್ಪಣೆ ಮಾಡಿದರು. ಸತಿ ಪತಿಗಳಿಗೊಂದಾದ ಭಕ್ತಿ, ಮೂರು ಜನ ಹೆಣ್ಣು ಮಕ್ಕಳು, ಒಬ್ಬ ಮಗ. ತಮ್ಮ ಬಾಳ ಸಂಗಾತಿಯ ಬಗ್ಗೆ ಅಪಾರವಾದ ಪ್ರೀತಿ, ಗೌರವವನ್ನಿಟ್ಟು ಕೊಂಡಿದ್ದರು. ಅವರು ಒಂದು ಕಡೆ 'ನಾನು ಸಾಹಿತಿಯಾಗಿ ಬೆಳೆಯುವುದಕ್ಕೆ ಮತ್ತು ಅಧಿಕಾರದಲ್ಲಿ ಪ್ರಾಮಾಣಿಕನಾಗಿ ಉಳಿಯಲಿಕ್ಕೆ ಕಾರಣ ನನ್ನ ಹೆಂಡತಿಯೇ ಹೊರತು ಬೇರೆ ಯಾರೂ ಇಲ್ಲ. ನನ್ನ ಸಾಹಿತ್ಯಕ್ಕೆ ಸ್ಫೂರ್ತಿಯ ಸೆಲೆ ಆಗಿ, ನನಗೆ ಶಕ್ತಿಯಾಗಿ ಬೆಂಬಲವಿತ್ತಿದ್ದಾಳೆ. ನನ್ನ ಲೇಖನಿಗೆ ಚೈತನ್ಯ ತುಂಬಿದವಳೂ ಅವಳೆ, ನನ್ನ ಸರ್ಕಾರಿ ಕಛೇರಿಗಳ ಕೆಲಸವನ್ನು ನಿರ್ಯೋಚನೆ ನಡೆಸಿಕೊಂಡು ಹೋಗಲು ಸಹಕರಿಸಿದವಳೂ ಅವಳೆ' ಎಂದಿದ್ದರು. ಅವರ ಈ ಮಾತುಗಳು ಹಾಲು-ಜೇನಿನಂತ ದಾಂಪತ್ಯ ಜೀವನಕ್ಕೆ ಭಾಷ್ಯ ಬರೆದಂತಿವೆ.

**ಸಾಹಿತ್ಯ ಕ್ಷೇತ್ರ** : ಸರ್ಕಾರದಲ್ಲಿ ಉನ್ನತ, ಜವಾಬ್ದಾರಿಯುತ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದರೂ, ಸಾಹಿತ್ಯ ಕ್ಷೇತ್ರದಲ್ಲಿನ ಒಲವಿನಿಂದ ಒಬ್ಬ ಕ್ರಿಯಾಶೀಲ, ಸೃಜನಶೀಲ ಸಾಹಿತಿಯಾಗಿ ಪ್ರಸಿದ್ಧರಾದರು. ಸದಾ ಅಧ್ಯಯನ ಶೀಲರಾಗಿದ್ದ ಶ್ರೀಯುತರು ತಮ್ಮ ಲೇಖನಿಯಿಂದ ಅನೇಕ ಮೌಲಿಕ ಕೃತಿಗಳನ್ನು ನೀಡಿ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದಾರೆ. ಅವರ ಕಾವ್ಯ, ವಚನ ಬರಹಗಳಲ್ಲಿ ಜೀವನ ಸ್ಪಂದನೆಯಿದೆ. ಜೀವಾನುಭವದ ರಸಪಾಕವಿದೆ. ಅನುಭವ, ಅನುಭಾವವಿದೆ. ಸರಳವಾಗಿದ್ದರೂ ಸಂಕೀರ್ಣತೆಯಿದೆ, 'ಕಾವ್ಯಾನಂದ' ಕಾವ್ಯನಾಮದಿಂದ ಪ್ರಸಿದ್ಧರಾದ ಡಾ. ಸಿದ್ಧಯ್ಯ ಪುರಾಣಿಕರು ಆಡಳಿತ ಮತ್ತು ಸಾಹಿತ್ಯ ಕ್ಷೇತ್ರಗಳೆರಡರಲ್ಲೂ ಪ್ರತಿಭೆಯನ್ನು ತೋರಿದ ಮಹಾನ್ ಸಾಧಕರು. ಡಾ. ಮಾಸ್ತಿ ವೆಂಕಟೇಶ್ ಅಯ್ಯಂಗಾರ, ಡಾ. ಎಚ್.ಎಲ್.







ನಾಗೇಗೌಡ ಹಾಗೂ ಡಾ. ಸಿದ್ಧಯ್ಯ ಪುರಾಣಿಕರು - ಈ ಮೂರು ಜನ ತ್ರಿಮೂರ್ತಿಗಳು ಭಾರತೀಯ ಆಡಳಿತ ಸೇವೆಯಲ್ಲಿ ಉನ್ನತ ಹುದ್ದೆಯಲ್ಲಿ ಸಮರ್ಥವಾಗಿ ಸೇವೆ ಸಲ್ಲಿಸಿದವರು. ಅಷ್ಟೇ ಸಮರ್ಥವಾಗಿ ಸಾಹಿತ್ಯ ಕ್ಷೇತ್ರದಲ್ಲಿಯೂ ಸೇವೆ ಸಲ್ಲಿಸಿ ಧೃವತಾರೆಯಾಗಿದ್ದಾರೆ.

ಆಧುನಿಕ ವಚನಕಾರರಲ್ಲಿ ಪ್ರಸಿದ್ಧರಾದ ಡಾ. ಚಜನಿ, ಪ್ರೊ. ಎಸ್.ವಿ. ರಂಗಣ್ಣ, ಪ್ರೊ. ಎಸ್.ವಿ. ಪರಮೇಶ್ವರ ಭಟ್, ಶ್ರೀ ಮೂಜಗಂ ಅವರ ಸಾಲಿನಲ್ಲಿ ಡಾ. ಸಿದ್ಧಯ್ಯ ಪುರಾಣಿಕರೂ ಒಬ್ಬರೂ ಎಂದು ಹೇಳಲು ಅಭಿಮಾನ ವೆನಿಸುತ್ತದೆ. 'ವಚನೋದ್ಯಾನ' ಅವರ ಒಂದು ಶ್ರೇಷ್ಠ ವಚನ ಗ್ರಂಥ. ಈ ಗ್ರಂಥದಲ್ಲಿ ೫೨೫ಕ್ಕೂ ಹೆಚ್ಚು ವಚನಗಳಿವೆ. "ಸ್ವತಂತ್ರ ಧೀರ ಸಿದ್ಧೇಶ್ವರ' ವಚನಾಂಕಿತದಲ್ಲಿ ಬರೆದ ವಚನಗಳು ಜೀವನಕ್ಕೆ ಹತ್ತಿರವಾಗಿದ್ದು ಮತ್ತೆ ಮತ್ತೆ ಓದಬೇಕೆನಿಸುತ್ತದೆ. ಭಾಷೆ ಮತ್ತು ಬಂಧದ ದೃಷ್ಟಿಯಿಂದ ಬಸವಾದಿ ಶರಣರ ವಚನಗಳ ಸತ್ವವನ್ನು ನೆನಪಿಗೆ ತರುತ್ತವೆ. ಉದಾಹರಣೆಗಾಗಿ ಅವರ ಒಂದೆರಡು ವಚನಗಳನ್ನು ಉಲ್ಲೇಖಿಸಬಹುದು.

'ನಿನ್ನನರಿವದೆ ಸ್ವರ್ಗ, ನಿನ್ನ ಮರೆಯುವುದೆ ನರಕ,
ನಿನ್ನ ನೆನಹೇ ಜೀವನ, ನಿನ್ನ ಮರವೇ ಮರಣ,
ನೀನೆಂಬುದೇ ಪುಣ್ಯ, ನಾನೆಂಬುದೇ ಪಾಪ,
ಎಲ್ಲಾ ನಿನ್ನಿಂದ ಎಂಬುದೇ ಸತ್ಯ, ನನ್ನಿಂದ ಎಂಬುದೇ
ಮಿಥ್ಯ, ನನಗಾಗಿ ಮಾಡಿದರೆ ಬಂಧನ, ನಿನಗಾಗಿ
ನಿನ್ನವರಿಗಾಗಿ ಮಾಡಿದರೆ ನಿರ್ಬಂಧನ,
ನೀನಿಲ್ಲದಿಲ್ಲವೆಂಬುದೆ ಜ್ಞಾನ, ಇದೆ ಎಂಬುದೇ ಅಜ್ಞಾನ,
ನಿನ್ನನ್ನು ನಿನಗಾಗಿ ಪ್ರೀತಿಸುವುದು ಭಕ್ತಿ,
ನಿನ್ನನು ನನಗಾಗಿ ಪ್ರೀತಿಸುವುದು ಶಕ್ತಿಯಯ್ಯ,
ಸ್ವತಂತ್ರ ಧೀರ ಸಿದ್ಧೇಶ್ವರಾ' । (೮೬)

ಸದ್ಭಕ್ತನ ದೃಷ್ಟಿಯಿಂದ ಸ್ವರ್ಗ-ನರಕಗಳು, ಸತ್ಯ-ಮಿಥ್ಯಗಳ ಮೊದಲಾದವುದರ ಬಗ್ಗೆ ವ್ಯಾಖ್ಯಾನ ಈ ವಚನದಲ್ಲಿದೆ.

"ಫಲವಿತ್ತ ರೆಂಬೆ ಬಾಗುತ್ತದೆ,
ಗೊನೆ ಹೊತ್ತ ಬಾಳೆ ಬಾಗುತ್ತದೆ
ತೆನೆ ಹೊತ್ತ ದಂಟು ಬಾಗುತ್ತದೆ,
ಏನೇನೂ ಇಲ್ಲದುದು ಬೀಗುತ್ತದೆ ನೋಡಾ - ಸ್ವತಂತ್ರ
ಧೀರ ಸಿದ್ಧೇಶ್ವರಾ" (೧೮೫)

"ಆಯುಷ್ಯವೆಲ್ಲ ಅನಾರೋಗ್ಯವನ್ನು ಸಹಿಸಿದೆ
ಬೆಂಕಿಯಲ್ಲದ ಬೆಂಕಿಯಲ್ಲಿ ದಹಿಸಿದೆ,
ಅನಾರೋಗ್ಯವೂ ನಿನ್ನ ದಾನವೆಂದು ಗ್ರಹಿಸಿದೆ,
ನೀನಿತ್ತ ಕಾಯಕವನ್ನು ಕೈಲಾದನಿತು ನಿರ್ವಹಿಸಿದೆ;
ಇನ್ನೇನ ಮಾಡಲಾಪೆನಯ್ಯಾ ನಾನು ?
ಓದುವ ಹುಚ್ಚನ್ನಿತ್ತು ಬಿಡುವಿಲ್ಲದೆ ಮಾಡಿದೆ,
ಬರೆವ ಹುಚ್ಚನ್ನಿತ್ತು ಹೊತ್ತು ಸಿಕ್ಕದಂತೆ ಮಾಡಿದೆ,
ಸೇವೆಯ ಹುಚ್ಚನ್ನಿತ್ತು ಸ್ವಾಸ್ಥ್ಯವಿಲ್ಲದಂತೆ ಮಾಡಿದೆ,
ನಿನಗೇ ಇಷ್ಟವಿಲ್ಲದರೆ ನನಗಾವ ನಷ್ಟ ?
ಸಾಧನೆಗೆ ಸಾಧ್ಯತೆ ಇಲ್ಲವಾದುದೇ ಕರಕಷ್ಟ !
ಒಂದು ಮಾತ್ರ ಸ್ಪಷ್ಟ
ನೀನಿತ್ತುದರಲ್ಲಿಯೇ ನಾನು ತುಷ್ಟ
ಸ್ವತಂತ್ರಧೀರ ಸಿದ್ಧೇಶ್ವರಾ." (ವಚನ ೫೦೮)

ಡಾ. ಸಿದ್ಧಯ್ಯ ಪುರಾಣಿಕರು ವಚನ ರಚನೆಯಲ್ಲಿ ಸಿದ್ಧಿ ಹಸ್ತರಾದಂತೆ, ಕಾವ್ಯ ರಚನೆಯಲ್ಲಿಯೂ ಸಿದ್ಧಿ ಹಸ್ತರಾಗಿದ್ದರು. **"ಕಾದಿ ಕ್ಷತ್ರಿಯನಾಗು, ಓದಿ ಬ್ರಾಹ್ಮಣ ನಾಗು, ಏನಾದರೂ ಆಗು ಮೊದಲು ಮಾನವನಾಗು"** ಎಂಬ ಜೀವನದ ದಿವ್ಯಸಂದೇಶವನ್ನು ನೀಡಿದ ದಾರ್ಶನಿಕ ಕವಿ, ಅನೇಕ ಸೃಜನಾತ್ಮಕ, ಶ್ರೇಷ್ಠ ಕವಿತೆಗಳನ್ನು ನೀಡಿದ್ದಾರೆ.

ಯಾರು ಹಿತವರು ನಿನಗೆ ಈ ಮೂವರೊಳಗೆ !
ನೀನಿತ್ತ ಕಸ ನುಂಗಿ ರಸವನೀಯುವ ಮಣ್ಣೋ !
ಬೆಂಕಿಯೊಳು ಸುಟ್ಟು ಅಲಂಕಾರವಾಗುವ ಹೊನ್ನೋ !
ಬಾಳಹಣತೆಯೊಳೆಣ್ಣೆಯಾಗಿ ಉರಿಯುವ ಹೆಣ್ಣೋ !

ಬಾಳ ಕಡಲಲಿ ಮುಳುಗಿ ಮೂರು ಮುತ್ತನು ತಂದೆ
'ಸ್ನೇಹ, ಸೈರಣೆ, ಮಮತೆ' ಎಂದು ಕರೆದೆ
ಬಾಳ ಬನದಲಿ ತಿರುಗಿ ಮೂರು ಫಲಗಳ ತಂದೆ
'ದಿಟ, ಚೆಲುವು, ಬಲವುಗಳು' ಎಂದು ಬರೆದೆ,

ಜೀವನ ಸುಂದರವಾಗಿರಲು 'ಸ್ನೇಹ, ಸೈರಣೆ, ಮಮತೆ' ಬೇಕು ಎಂಬುದನ್ನು ಸರಳವಾಗಿ ಮನಮುಟ್ಟುವಂತೆ ಹೇಳಿದ್ದಾರೆ. ಅವರ ಒಂದೊಂದು ಕವನಗಳು ಜೀವನಕ್ಕೆ ಸಂದೇಶವನ್ನು ನೀಡುವ ಸುಂದರ ಕಾವ್ಯಪುಷ್ಪಗಳು. ಅವರಿಗೆ ಕನ್ನಡ, ಸಂಸ್ಕೃತ, ಇಂಗ್ಲೀಷ್, ಉರ್ದು, ಮರಾಠಿ, ಪರ್ಷಿಯನ್ ಮೊದಲಾದ ಭಾಷೆಗಳ ಪರಿಚಯವಿತ್ತು.







**ಸಾಹಿತ್ಯ ಕ್ಷೇತ್ರ** : ಜಲಪಾತ, ಕರುಣಾಶ್ರಾವಣ, ಮಾನಸ ಸರೋವರ, ಕಲ್ಲೋಲ ಮಾಲೆ, ಮೊದಲು ಮಾನವನಾಗು, ಚರಗ, ಹಾಲ್ದೆನೆ, ಮರುಳಸಿದ್ಧನ ಕಂತೆ ಕವನ ಸಂಕಲಗಳನ್ನು ವಚನೋದ್ಯಾನ, ವಚನ ನಂದನ, ವಚನರಾಮ, ವಚನ ಸಂಗ್ರಹಗಳು, ಆತ್ಮಾರ್ಪಣ, ಭಾರತವೀರ, ರಜತರೇಖೆ, ಭಗ್ನನೂಪುರ ನಾಟಕಗಳನ್ನು, ಕಥಾಮಂಜರಿ, ತುಷಾರಹಾರ ಕಥಾ ಸಂಕಲನಗಳು, ತುಪ್ಪಾ ರೊಟ್ಟಿಗೇ ಗೇಗೇ, ಗಿಲ್‌ಗಿಲ್ ಗಿಲಗಚ್ಚಿ, ತಿರುಗಲೆ ತಿರುಗಲೆ ತಿರುಗುಯ್ಯಾಲೆ, ಬಣ್ಣ ಬಣ್ಣ ಓಕುಳಿ ಭಾರತವೆಲ್ಲಕೆ, ಬಾವುಟವೊಂದೇ ಮಕ್ಕಳ ಸಾಹಿತ್ಯ ಕೃತಿಗಳು, ಶರಣ ಚರಿತಾಮೃತ, ಸಿದ್ಧರಾಮ, ಬಸವಣ್ಣನವರ ಜೀವನ ಹಾಗೂ ಸಂದೇಶ, ನಜೀರ್ ಅಕಬರಾಬಾದಿ, ಹರ್ಡೇಕರ್ ಮಂಜಪ್ಪ, ಮಿರ್ಜಾ ಗಾಲಿಬ್, ಮಹಾದೇವಿ, ಅಲ್ಲಮಪ್ರಭು ಜೀವನ ಚರಿತ್ರೆಗಳನ್ನು ಲೋಕಾರ್ಪಣೆ ಮಾಡಿದ್ದಾರೆ.

ಡಾ. ಸಿದ್ಧಯ್ಯ ಪುರಾಣಿಕರು ಹನ್ನೆರಡಕ್ಕೂ ಹೆಚ್ಚು ಕೃತಿಗಳನ್ನು ಸಂಪಾದಿಸಿಕೊಟ್ಟಿದ್ದಾರೆ. ಅವುಗಳಲ್ಲಿ ಸುಬೋಧಸಾರ, ಶ್ರೀಕಾರ, ಪ್ರಬಂಧಮಾಲೆ, ಪದ್ಯ ರತ್ನಾಕರ, ಮಹಾತ್ಮ ಕನಕದಾಸರ ಪ್ರಶಸ್ತಿ, ಶರಣ ಪ್ರಸಾದ, ಮಣಿಹ, ಬಸವದರ್ಶನ (ಹಿಂದಿ) ಬಸವ ಮತ್ತು ದಲಿತೋದಯ, ಬಸವ ಮತ್ತು ವಿಚಾರವಾದ ಮೊದಲಾದವುಗಳನ್ನು ಹೆಸರಿಸಬಹುದು. ಅಲ್ಲದೆ ಇವರ ಅನೇಕ ಕೃತಿಗಳು ಬೇರೆ ಬೇರೆ ಭಾಷೆಗಳಿಗೆ ಅನುವಾದಗೊಂಡಿವೆ.

**ಗೌರವ ಡಾಕ್ಟರೇಟ್** : ಡಾ. ಸಿದ್ಧಯ್ಯ ಪುರಾಣಿಕರು, ಸಾಹಿತ್ಯ ಕ್ಷೇತ್ರದಲ್ಲಿ ಸಲ್ಲಿಸಿದ ಅನುಪಮ ಸೇವೆಯನ್ನು ಮನಗೊಂಡು ಕರ್ನಾಟಕ ವಿಶ್ವವಿದ್ಯಾಲಯ ೧೯೭೬ ರಲ್ಲಿ ಗೌರವ ಡಾಕ್ಟರೇಟ್‌ನ್ನು ನೀಡಿ ಗೌರವಿಸುವುದರ ಮೂಲಕ ತನ್ನನ್ನು ತಾನೇ ಗೌರವಿಸಿಕೊಂಡಿತು. ಆ ಸಂದರ್ಭದಲ್ಲಿ ಅವರು ಪ್ರತಿಕ್ರಿಯಿಸುತ್ತಾ "ವಿಶ್ವವಿದ್ಯಾನಿಲಯದವರೇನೋ ನನಗೆ ಪದವಿಯಿತ್ತರು, ಆದರೆ ಶಿವನ ವಿದ್ಯಾಲಯದಲ್ಲಿ ಪದವಿ ಲಭಿಸುವುದೆಂದು" ಎಂದು ಹೇಳಿದ್ದರು. ಈ ಸಂದರ್ಭವನ್ನು ವಚನ ಒಂದರಲ್ಲಿ ಹೀಗೆ ಅಭಿವ್ಯಕ್ತಿಗೊಳಿಸಿದ್ದಾರೆ.

**"ಪದವಿದಾನ ಸಮಾರಂಭಕ್ಕೆ ಕರೆದಿರುವಯ್ಯಾ**
**ಮತ್ತೊಂದು ಪದವಿಯ ಕೊಡುವರಂತೆ !**
**ನಿನ್ನ ಪದಭಕ್ತನಾಗಿಹುದೇ ಪರಮ ಪದವಿ ನನಗೆ**
**ಮತ್ತೇಕೆ ಕೊಡುವರೋ ಮತ್ತೊಂದು ಪದವಿಯನು**
**ಹೊಸದೊಂದು ಉಪಾಧಿಯನು**
**ಬಯಸದೆ ಬಂದ ಲಿಂಗಭೋಗವಿದು**
**ಬಿಡುವಂತೆಯೂ ಇಲ್ಲ; ಹಿಡಿಯುವಂತೆಯೂ ಇಲ್ಲ !**
**ನನ್ನ ಮೂಲಕ ನಿನ್ನವರಿಗೆ ಸಲ್ಲಿಸಿದನು**
**ಸ್ವತಂತ್ರಧೀರ ಸಿದ್ಧೇಶ್ವರಾ !**

ಡಾ. ಸಿದ್ಧಯ್ಯ ಪುರಾಣಿಕರದು ಕಲ್ಮಶವಿಲ್ಲದ ಪರಿಶುದ್ಧವಾದ ಮನಸ್ಸು. ಅವರ ನಡೆ ನುಡಿಗಳಲ್ಲಿ ಏಕತಾನತೆಯಿತ್ತು.

**ಪ್ರಶಸ್ತಿ ಗೌರವ** : 'ವಚನೋದ್ಯಾನ' ಕೃತಿಗೆ ಕಲ್ಕತ್ತಾದಲ್ಲಿರುವ ಭಾರತೀಯ ಭಾಷಾ ಪರಿಷತ್ತು ಸೃಷ್ಟ್ಯಾತ್ಮಕ ಕೃತಿಗಳಿಗೆ ನೀಡುವ ರಾಷ್ಟ್ರೀಯ ಪುರಸ್ಕಾರ ಹನ್ನೊಂದು ಸಾವಿರ ನಗದು ಬಹುಮಾನದೊಂದಿಗೆ ೧೯೭೭ ರಲ್ಲಿ ದೊರೆಯಿತು. ಈ ಸಂಸ್ಥೆಯಿಂದ ಪ್ರಪ್ರಥಮವಾಗಿ ಪಡೆದ ಕನ್ನಡಿಗರಲ್ಲಿ ಡಾ. ಸಿದ್ಧಯ್ಯ ಪುರಾಣಿಕರು ಮೊದಲಿಗರೆಂಬುದು ಅಭಿಮಾನದ ಸಂಗತಿ. ಇದೇ ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿಯೂ ದೊರೆತಿದೆ. ಕರ್ನಾಟಕ ವಿಶ್ವವಿದ್ಯಾನಿಲಯದಿಂದ ಮಾಳವಾಡ ಪ್ರಶಸ್ತಿಯ ಗೌರವಕ್ಕೂ ಭಾಜನರಾಗಿದ್ದರು.

ನಿವೃತ್ತಿಯ ನಂತರ ಹಲವಾರು ಸಂಘ ಸಂಸ್ಥೆಗಳು ಅವರ ಸೇವೆಯನ್ನು ಬಳಸಿಕೊಳ್ಳಲು ಮುಂದಾದರೂ ಅವರು ಪ್ರೀತಿಯ ಅಹ್ವಾನವನ್ನು ನಯವಾಗಿ ನಿರಾಕರಿಸಿದರು. ಆದರೆ ಬಸವ ಸಮಿತಿಯ ಪದಾಧಿಕಾರಿಗಳ ಪ್ರೀತಿಯ ಆಹ್ವಾನಕ್ಕೆ ಕಟ್ಟು ಬಿದ್ದು 'ಬಸವ ಜರ್ನಲ್' ಆಂಗ್ಲ ತ್ರೈಮಾಸಿಕ ಹಾಗೂ 'ಬಸವ ಪಥ' ಕನ್ನಡ ದ್ವೈಮಾಸಿಕ ಪತ್ರಿಕೆಗಳಿಗೆ ಪ್ರಧಾನ ಸಂಪಾದಕರಾಗಿ, ಬಸವ ಸಮಿತಿಯ ಸಂಶೋಧನೆ ಮತ್ತು ಪ್ರಕಟಣೆಗಳ ನಿರ್ದೇಶಕರಾಗಿಯೂ ಸೇವೆ ಸಲ್ಲಿಸಿದರು. ಅವರು ಕುಳಿತ ಕುರ್ಚಿಯ ಮೇಲೆ ಕುಳಿತು ನಿರ್ದೇಶಕನಾಗಿ ಸೇವೆ ಸಲ್ಲಿಸುವ ಸೌಭಾಗ್ಯ ನನ್ನದಾಗಿತ್ತು ಎಂದು ಹೇಳಲು ಅಭಿಮಾನವೆನಿಸುತ್ತದೆ. ಅವರಿಗೆ ೭೫ ವರ್ಷ ತುಂಬಿದ ಶುಭ ಸಂದರ್ಭದಲ್ಲಿ ಶ್ರೀ ಜಿ. ನಾರಾಯಣ ಅವರ ಅಧ್ಯಕ್ಷತೆಯಲ್ಲಿ ರಚಿತಗೊಂಡ ಅಭಿನಂದನಾ ಸಮಿತಿ ರಾಜ್ಯ ಮಟ್ಟದಲ್ಲಿ ಅಭಿನಂದನಾ ಸಮಾರಂಭವನ್ನು ಏರ್ಪಡಿಸಿ ಅರ್ಥಪೂರ್ಣವಾಗಿ ಆಚರಿಸಿದ್ದು ನನ್ನ ಮನಸ್ಸಿನಲ್ಲಿ ಈಗಲೂ ಹಚ್ಚಹಸಿರಾಗಿದೆ. ಸಾವಿರಾರು ಜನ ಅಭಿವಮಾನಿಗಳು, ಸಾಹಿತಿ, ವಿದ್ವಾಂಸರು ಈ ಸಮಾರಂಭದಲ್ಲಿ ಭಾಗಿಯಾಗಿ ಯಶಸ್ವಿಗೊಳಿಸಿದರು.







**ಸಿದ್ಧಗಂಗಾ ಮಠದೊಂದಿಗೆ** : ಶ್ರೀ ಸಿದ್ಧಗಂಗಾ ಮಠ ಹಾಗೂ ಪದ್ಮಭೂಷಣ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರೊಂದಿಗೆ ಅಪಾರವಾದ ಭಕ್ತಿ, ಗೌರವವನ್ನಿಟ್ಟುಕೊಂಡಿದ್ದರು. ಶ್ರೀಮಠದಲ್ಲಿ ನಡೆದ ಅನೇಕ ಸಮಾರಂಭಗಳಲ್ಲಿ ಭಾಗವಹಿಸಿ ವಿದ್ವತ್‌ಪೂರ್ಣವಾದ ಉಪನ್ಯಾಸ ನೀಡಿ ಪರಮಪೂಜ್ಯ ಶ್ರೀಗಳವರಿಂದ ಆಶೀರ್ವಾದ ಪಡೆದು ಧನ್ಯರಾಗಿದ್ದರು. ಪೂಜ್ಯ ಶ್ರೀಗಳವರ ಪಟ್ಟಾಧಿಕಾರ ಸಮಾರಂಭದಲ್ಲಿ ಹೊರತಂದ 'ಸಿದ್ಧಗಂಗಾ' ಬೃಹತ್ ಗ್ರಂಥದ ಸಂಪಾದಕ ಮಂಡಳಿ ಸದಸ್ಯರಾಗಿ ಸೇವೆ ಸಲ್ಲಿಸಿದ್ದರು. ಶ್ರೀಯುತರು ಪರಮಪೂಜ್ಯ ಶ್ರೀಗಳವರನ್ನು ಕುರಿತು ಬರೆದ ಲೇಖನದಲ್ಲಿ ಹೀಗೆ ನುಡಿನಮನಗಳನ್ನು ಸಲ್ಲಿಸಿ ಕೃತಾರ್ಥರಾಗಿದ್ದಾರೆ.

"ಶ್ರೀ ಶ್ರೀಮನ್ನಿರಂಜನ ಪ್ರಣವ ಸ್ವರೂಪಿಗಳು, ತ್ರಿವಿಧ ದಾಸೋಹ ಮೂರ್ತಿಗಳು, ಮಹಾಶಿವಯೋಗಿಗಳೂ ಆದ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ನಿಲವನ್ನು ಆ ಸಿದ್ಧಲಿಂಗೇಶ್ವರನೇ ಬಲ್ಲನಲ್ಲದೆ ನಮ್ಮಂಥವರು ಬಲ್ಲವೆಂದು ಸೊಲ್ಲಿಸಲಾದೀತೆ! ಮಾತು ಸೋತು ಶರಣಾಗುತ್ತದೆ ಶ್ರೀಗಳವರ ಸನ್ನಿಧಿಯಲ್ಲಿ. ಈ ಸರ್ವಾಂಗ ಲಿಂಗಿಯಲ್ಲಿ ಯಾವುದನ್ನು ಮೆಚ್ಚುವುದೆಂದು ದಿಗ್ಭ್ರಮೆಯಾಗುತ್ತದೆ. ನಿಶ್ಚಿತ ಜ್ಞಾನವನ್ನೇ! ನಿರ್ಮಲ ಕ್ರಿಯಯನ್ನೇ! ಉಜ್ವಲ ವೈರಾಗ್ಯವನ್ನೇ! ಶಮದಮಾದಿ ದೈವೀಸಂಪತ್ತನ್ನೇ! ಬಹುಭಾಷಾ ಪಾರಂಗತೆಯನ್ನೇ! ಸಕಲ ಜೀವರಾಶಿಗಳನ್ನು ತನ್ನ ತೆಕ್ಕೆಯಲ್ಲಿ ಒಳಗೊಳ್ಳುವ ಅಪಾರ ಅನುಕಂಪವನ್ನೇ! ಬೆಕ್ಕಸ ಬೆರಗುಗೊಳಿಸುವ ಶಿಕ್ಷಣ ಸಂಸ್ಥೆಗಳ ಸಂಸ್ಥಾಪನೆಯನ್ನೇ! ಪಂಡಿತ ಪಾಮರಿಬ್ಬರನ್ನು ಏಕಪ್ರಕಾರವಾಗಿ ಮೆಚ್ಚಿಸುವ ಮಾತುಗಾರಿಕೆಯನ್ನೇ! ವೈಜ್ಞಾನಿಕ ದೃಷ್ಟಿಯನ್ನೇ! ಆಧ್ಯಾತ್ಮಿಕ ಜ್ಞಾನಿತ್ವವನ್ನೇ! ಸ್ವಧರ್ಮ ನಿಷ್ಠೆ ಪರಧರ್ಮ ಸಹಿಷ್ಣುತಗಳನೇ! ಕವಿ ಕಲಾವಿದರು, ವಿದ್ವಾಂಸರಿಗೆ ನಿರಂತರ ನೀಡುತ್ತಿರುವ ಆಶ್ರಯವನ್ನೇ! ಸಾಹಿತ್ಯ ಸಂಸ್ಕೃತಿಗಳ ಪೋಷಣೆಯನ್ನೇ! ಸಂಘಟನಾ ಶಕ್ತಿಯನ್ನೇ! ಬಹುವಿಷಯ ಪರಿಣಿತಿಯನ್ನೇ! ಜಗಳವನ್ನು ಬಗೆಹರಿಸುವ ವ್ಯವಹಾರ ಕುಶಲತೆಯನ್ನೇ! ದಿನ ದಿನವೂ ಎಣಿಕೆಯಿಲ್ಲದಂತೆ ಬರುವ ಭಕ್ತರು, ವೈಯಕ್ತಿಕ ಸಮಸ್ಯೆಗಳಿಂದ ಆರಂಭಿಸಿ, ದಾಸೋಹ, ವಿದ್ಯಾರ್ಥಿ ನಿಲಯ, ಶಾಲಾ ಕಾಲೇಜುಗಳ ಜಟಿಲ ಸಮಸ್ಯೆಗಳು ಎಲ್ಲವನ್ನು ಲೀಲಾಜಾಲವಾಗಿ ಪರಿಹರಿಸುವ ಪರಮಾದ್ಭುತವನ್ನೇ! ಉದ್ಧರಣೆಗಳನ್ನು ಬರೆಯುವುದರಿಂದ ಸರ್ವೋದ್ಧರಾದ ಸಮಗ್ರ ಪ್ರಯೋಜನಗಳವರೆಗೆ ಸರ್ವಕಾರ್ಯಗಳಲ್ಲಿಯೂ ಒಡಮೂಡುವ ಕಾಯಕ ನಿಷ್ಠೆಯನ್ನೇ! ಗಡಿಯಾರವೂ ನಾಚಿಕೊಳ್ಳುವಂತೆ ಸಮಯ ಪರಿಪಾಲನೆಯನ್ನೇ! ಶರಣ ವಿಜಯಜೀವೇಂದ್ರಿಯತ್ವಗಳನ್ನೇ! ಅಲೋಚಿಸಿದೆನಿತ್ತು, ಅಪಾರವಾಗಿ ತೋರುವ ಈ ಆಧ್ಯಾತ್ಮ ಸೂರ್ಯರ ಅಗಾಧವಾದ ಅವರ್ಣೀಯವಾದ ವ್ಯಕ್ತಿತ್ವದ ಎಲ್ಲಾ ಅಂಶಗಳನ್ನು ಗುರುತಿಸಿ ಅವುಗಳ ಒಟ್ಟು ಬೆಲೆಯನ್ನು ಕಟ್ಟಬಲ್ಲವರಾರು! ಅವರ ಒಂದೊಂದು ನುಡಿಯೂ ಪೋಣಿಸಿದ ಮುತ್ತಿನಹಾರ, ಪರಮಪೂಜ್ಯ ಶ್ರೀಗಳವರ ಘನಶಿವ ವ್ಯಕ್ತಿತ್ವಕ್ಕೆ ಬರೆದ ಭಾಷ್ಯ.

ಡಾ. ಸಿದ್ಧಯ್ಯ ಪುರಾಣಿಕರು ೭೬ ವರ್ಷಗಳ ಬೇವು ಬೆಲ್ಲವನ್ನು ಸವಿದು, ಎಲ್ಲರೊಂದೊಳಗಾಗಿ ಸಾರ್ಥಕ ಜೀವನ ನಡೆಸಿದರು. ಶರಣರು ಹೇಳಿದಂತೆ ಮರಣವನ್ನು ಪ್ರೀತಿಯಿಂದ ಬರಮಾಡಿಕೊಂಡರು. ಅವರೇ ಒಂದು ಕಡೆ ಹೇಳಿದಂತೆ.

**ಸಾವು ಹಗೆಯಂದವನೆ ಜೀವನವು ವ್ಯಥೆಯ ಕಥೆ**
**ಸಾವು ಸಖನೆಂದವನ ಬದುಕು ಬಂಗಾರ,**
**ಜೀವ ಸಾವಿನ ಕೊಡುಗೆ, ಸಾವು ಜೀವನದುಡಿಗೆ**
**ಸಾವಿಗೂ ಶರಣೆನ್ನೋ ಮರುಳಸಿದ್ಧ.**

ಮರಣ ಅವರಿಗೆ ಮಹಾನವಮಿಯಾಯಿತು. ಅವರು ಭೌತಿಕವಾಗಿ ಇಂದು ನಮ್ಮ ಮುಂದೆ ಇಲ್ಲದೆ ಹೋದರೂ ಅವರು ಕೊಟ್ಟು ಹೋದ ಸಾಹಿತ್ಯದ ಮೂಲಕ ಅಮರರಾಗಿದ್ದಾರೆ. ■

## ಶ್ರೀವಾಣಿ

ಮನುಷ್ಯ ಶ್ರಮಜೀವಿಯಾಗಬೇಕು. ಕಾಯಕ ಮಾಡುವಂತವನಾಗಬೇಕು. ವೃಥಾ ಕಾಲಹಾನಿ ಮಾಡಬಾರದು. ಫಲ ಬೇಕಾದರೆ ಕಾಯಕ ಮಾಡಿ ಫಲವನ್ನು ಸ್ವೀಕಾರ ಮಾಡಬೇಕು. ಮನುಷ್ಯ ಕಾಯಕ ಜೀವಿಯಾಗಿ ತತ್ತ್ವ ನಿಷ್ಠನಾಗಿ ತನ್ನ ಕರ್ತವ್ಯ ಚೆನ್ನಾಗಿ ಮಾಡಬೇಕು. ಆಗ ತಾನಾಗಿಯೇ ಫಲ ದೊರೆಯುತ್ತದೆ.

ಲೇಖನ

# ಇಷ್ಟಲಿಂಗ ಯೋಗಾನುಭಾವಿ ನೀಲಾಂಬಿಕೆ

- ಯೋಗೀಶ್ ನಿರ್ವಿಕಲ್ಪ *

**ಅಲ್ಲಲ್ಲಿಯ ಸುಖಂ ಭೋ ಎನ್ನಲಿಲ್ಲ**
**ಅಲ್ಲಲ್ಲಿಯ ಪಶುತ್ವವಿಲ್ಲಂ ಭೋ**
**ಆ ಪಶು ಕಾಯವಂ ಕಳೆದು ಅನು ಪರಿಣಾಮವಡಗಿದವಳಯ್ಯಾ**
**ಪರಿಣಾಮವ ವಿವರದಿಂದ ಪರವಸ್ತುವಿನ ನೆಲೆಯ ತಿಳಿದು,**
**ಪರಮ ಪ್ರಸಾದಿಯಾದೆನು**
**ಪ್ರಾಣಯೋಗ ಪ್ರಸಾದಮೂರ್ತಿಯುಳ್ಳವಳಾದ ಕಾರಣ**
**ಆನು ಬಸವಾ ಬಸವಾ ಬಸವಾ ಎನುತಿರ್ದೆನಯ್ಯಾ ಸಂಗಯ್ಯ.**

"ಸದಾ ಮನಸ್ಸು ಹೊರಪ್ರಪಂಚದಲ್ಲಿಯೇ ಸುಖವನ್ನು ಹುಡುಕಲು ಹೊರಟಿದೆ. ನಿಜ ನೆಲೆಯ ನಿಜಸುಖ ಹೊರ ಪ್ರಪಂಚದ ವಿಷಯ ವಸ್ತುಗಳಿಂದ ದೊರಕಲು ಸಾಧ್ಯವೇ? ಸಾಧ್ಯವಿಲ್ಲ. ಸುಖದ ಅನ್ವೇಷಣೆ ಅಥವಾ ಸುಖ ಪಡೆದೆ ಎಂಬುವುದೆಲ್ಲವೂ ಸಹ ಮನಸ್ಸಿನ ಭ್ರಾಂತಿ ಅಥವಾ ಮಾಯೆ ಎನಿಸಿಕೊಳ್ಳುತ್ತದೆ. ಬೇಕು, ಬೇಕೆಂಬ ಪಶುತ್ವ ಭಾವನೆಯ ಸುಖದ ಕಲ್ಪನೆಯ ಕಾಯ ಗುಣಗಳನ್ನು ಮೊದಲು ನಾವು ಕಳೆದುಕೊಳ್ಳಬೇಕು. ಮನಚಿತ್ತ ಬುದ್ಧಿಗಳಿಗೆ ಪರಮಾಶ್ರಯವಾದ ಪರವಸ್ತು (ಪರಮಾತ್ಮ) ವಿನ ನಿಜ ನೆಲೆಯನ್ನು ಅರಿಯಬೇಕು. ಪರಮಾತ್ಮನ ನಿಜ ನೆಲೆಯಲ್ಲಿಯೇ ಪರಮಸುಖ ಅಡಗಿದ್ದು, ಅದನ್ನು ಕಂಡು ಅನುಭಾವಿಸುವುದೇ ಬದುಕಿನ ಪರಮ ಉದ್ದೇಶವಾಗಬೇಕು" ಎಂದು ಜನಮಾನಸಕ್ಕೆ ಆಧ್ಯಾತ್ಮ ತತ್ತ್ವ ಸಂದೇಶವನ್ನು ಉಪದೇಶಿಸಿದವರು ಬಸವಣ್ಣನವರ ವಿಚಾರ ಪತ್ನಿ (Intellectual Companian) ಮತ್ತು ಇಷ್ಟಲಿಂಗ ಯೋಗ ಸಾಧನೆಯಲ್ಲಿ ಅಪ್ರತಿಮ ಸಾಧನೆ ಮಾಡಿದ ಶ್ರೇಷ್ಠ ಅನುಭಾವಿ ನೀಲಾಂಬಿಕಾ ತಾಯಿಯವರು.

ಲಿಂಗಾಯತ ಧರ್ಮದ ತತ್ತ್ವ ವಿಚಾರಗಳನ್ನು ತನುಮನಗಳಲ್ಲಿ ಅರಳಿಸಿಕೊಂಡು, ತತ್ತ್ವದ ಸಾಕಾರ ರೂಪದಂತಿದ್ದ ಅವರು ಗುರುಬಸವಣ್ಣನವರು ಪ್ರತಿಪಾದಿಸಿದ ವೈಚಾರಿಕ ದೃಷ್ಟಿಕೋನದ ಸಿದ್ಧಾಂತಗಳಿಗೆ ಕಣ್ಣಾಗಿದ್ದರು. ವಚನ ಸಾಹಿತ್ಯ ಸಂರಕ್ಷಣೆ, ಅದರ ಪ್ರಸಾದ ಕಾರ್ಯಕ್ಕೆ ಮಾರ್ಗಸೂಚಿಯಾಗಿದ್ದ ಅವರು ಶರಣ ಸಮೂಹದ ಆರಾಧ್ಯ ತಾಯಿ, ಸದಾ ಅಲೌಕಿಕ ಆನಂದದ ಪ್ರಪಂಚದಲ್ಲಿಯೇ ವಿಹರಿಸಿದ್ದ ಅವರು ಶರಣ ಧರ್ಮದ ಅನರ್ಘ್ಯ ರತ್ನ ಎನಿಸಿಕೊಂಡಿದ್ದಾರೆ.

**ಆಧ್ಯಾತ್ಮ ಲೋಕದತ್ತ ಪಯಣ :** ಬಸವಣ್ಣನವರಲ್ಲಿದ್ದ ಅಪ್ರತಿಮ ಪ್ರೌಢಿಮೆ ಮತ್ತು ವೈಚಾರಿಕ ಚಿಂತನೆ ಕಂಡ ಅವರ ಸೋದರ ಮಾವನವರಾದ ಮಂತ್ರಿ ಬಲದೇವರಸರು ತಮ್ಮ ಏಕೈಕ ಪುತ್ರಿಯಾದ ನೀಲಾಂಬಿಕೆಯನ್ನು ಬಸವಣ್ಣನವರಿಗೆ ಧಾರೆ ಎರೆಯಲು ನಿಶ್ಚಯಿಸುತ್ತಾರೆ. ವಿವಾಹ ಬದುಕಿನ ಉದ್ದೇಶ ಮತ್ತು ಗುರಿಗಮ್ಯತೆಗಳ ಕುರಿತು ಬಸವಣ್ಣನವರಿಗೆ ಧಾರೆ ಜ್ಞಾನಗಳಿಲ್ಲದ ನೀಲಾಂಬಿಕೆಯವರು ಬಸವಣ್ಣನವರ ಬಾಳ ಸಂಗಾತಿಯಾಗುತ್ತಾರೆ. ಸಾಂಸಾರಿಕ ಯಾವುದೇ ವಿಚಾರ ಬೆಳೆದ ಅವರಿಗೆ ಬಸವಣ್ಣನವರ ಸಂಸರ್ಗದಿಂದ ಪಾರಮಾರ್ಥಿಕ ಬದುಕಿನ ದಿವ್ಯ ದರ್ಶನವಾಗುತ್ತದೆ. ಸಾಂಸಾರಿಕ ಬದುಕಿನ ಶರಧಿಯಲ್ಲಿಯೇ ಅವರು ತಮ್ಮ ಬದುಕಿನ ನೋಟವನ್ನು ಆಧ್ಯಾತ್ಮ ಲೋಕದತ್ತ ಪರಿವರ್ತಿಸಿಕೊಳ್ಳುತ್ತಾರೆ. ಕ್ಷಣ ಮಾತ್ರದಲ್ಲಿಯೇ

* ಕುಚಲಕ್ಕೇರಿ, ಬಿ.ಹೆಚ್.ರಸ್ತೆ, ಶಿವಮೊಗ್ಗ-೫೭೭೨೦೧



"ಜೀವನ ಎನ್ನುವುದು ಕೇವಲ ಭೌತಿಕ ಸುಖವನ್ನು ಪಡೆಯಲಿಕ್ಕಾಗಿ ಅಲ್ಲ ! ಅಂತರಂಗದಲ್ಲಿರುವ ಪರಮ ವಸ್ತುವಾದ ಪರಮಾತ್ಮನನ್ನು ಕಂಡು ಅನುಸಂಧಾನಿಸುವುದಕ್ಕಾಗಿ" ಎಂಬ ಸತ್ಯವನ್ನು ಅವರು ಅರಿಯುತ್ತಾರೆ. ಲೌಕಿಕ ಬದುಕಿನಿಂದ ಆಧ್ಯಾತ್ಮ ಬದುಕಿನ ಲೋಕದತ್ತ ಪ್ರಯಾಣಿಸಿದ ಅವರು ಬಸವಣ್ಣನವರಿಂದ ಅನುಗ್ರಹಿಸಲ್ಪಟ್ಟ ಇಷ್ಟಲಿಂಗ ಯೋಗದಲ್ಲಿ ತನ್ಮಯರಾಗುತ್ತಾರೆ. ಇಷ್ಟಲಿಂಗ ಯೋಗದ ಲಿಂಗಾಂಗ ಸಮರಸದ ಅನುಭಾವ ಪಡೆದ ಅವರಿಗೆ ಲಿಂಗಾಂಗ ಸಮರಸದ ಲಿಂಗಾನುಭಾವವೇ ಪ್ರಾಣವೆನಿಸಿತ್ತು.

**ವಿಚಾರಪತ್ನಿ :** ಧರ್ಮ, ಅರ್ಥ, ಕಾಮ ಮತ್ತು ಮೋಕ್ಷಗಳನ್ನು ವಿಭಿನ್ನ ಮತ್ತು ವೈಚಾರಿಕ ನೆಲೆಯಲ್ಲಿ ಚಿಂತಿಸಿ, ಜನತೆಯಲ್ಲಿ ಹೊಸ ಸಂಚಲನ ಮೂಡಿಸಿದ ಬಸವಣ್ಣನವರ ದೃಷ್ಟಿಯಲ್ಲಿ ವೈವಾಹಿಕ ಬದುಕು ಎಂದಿಗೂ ಬಂಧನವಾಗಿರಲಿಲ್ಲ. ವೈವಾಹಿಕ ಬದುಕನ್ನೇ ಪಾರಮಾರ್ಥಿಕ ಸಾಧನೆಗೆ ಸೋಪಾನ ಮಾಡಿಕೊಂಡ ಹಿರಿಮೆ ಬಸವಾದಿ ಶರಣರದ್ದು. "ಪರಮಾತ್ಮ ತತ್ತ್ವದ ಅನುಭಾವದಿಂದ ಮನಸ್ಸು ಪರಿಪಕ್ವಗೊಳ್ಳಬೇಕು. ಪತಿ-ಪತ್ನಿ ಭಾವದಿಂದ ಮನಸ್ಸು ಹೊರಬಂದಾಗ, ಮಾತೃ ಸಂಬಂಧದ ಭಾವತರಂಗಗಳು ಅನಾವರಣಗೊಳ್ಳುತ್ತದೆ" ಎಂದು ತಿಳಿಸುವ ಬಸವಣ್ಣನವರು ಅಂತಹ ಮಾನಸಿಕ ಪರಿವರ್ತನೆಗೆ ತಮ್ಮ ಪತ್ನಿಯನ್ನು ಕರೆದೊಯ್ದರು. ಇದು ಅವರೊಳಗಿನ ಸ್ತ್ರೀಪರ ಕಾಳಜಿಗೊಂದು ಸಾಕ್ಷಿ. ಬಸವಣ್ಣನವರಿಂದ ಬದುಕಿನ ನಿಜಾರ್ಥವನ್ನು ಅರ್ಥೈಸಿಕೊಂಡಿದ್ದ ಅವರು 'ಬಸವಣ್ಣ ಅನುಭಾವದಿಂದ ವಿವರ ಕಂಡು ವಿಚಾರಪತ್ನಿಯಾದೆನಯ್ಯಾ ಸಂಗಯ್ಯಾ' ಎಂದು ತಿಳಿಸುವ ನುಡಿಗಳು ಅತ್ಯಂತ ಗಮನಾರ್ಹ ಮತ್ತು ಮೌಲಿಕವಾದದ್ದು.

ಪತಿ-ಪತ್ನಿಯರು ಸಾಂಸಾರಿಕ ಬದುಕಿನಲ್ಲಿ ಸಮರಸವಾಗಿ ಬಾಳಬೇಕು. ಪತಿಯ ಆದರ್ಶವನ್ನು ಪತ್ನಿ ಅರಿಯಬೇಕು. ಪತ್ನಿಯ ಆದರ್ಶವನ್ನು ಪತಿ ಅರಿಯಬೇಕು. ಪತಿ-ಪತ್ನಿಯರು ಒಂದಾಗಿ ಬದುಕಿನ ನಿಜನೆಲೆಯ ಉದ್ದೇಶವನ್ನು ತಿಳಿಯಬೇಕು. ನಿಜ ನೆಲೆಯ ಸಾಕಾರಕ್ಕೆ ಪೂರಕವಾಗಿ ಪ್ರತಿಸ್ಪಂದಿಸಿ ಬದುಕುವುದು ವಿಚಾರಪೂರ್ಣ ಪತ್ನಿಯ ಕರ್ತವ್ಯ ಎಂದು ಅರ್ಥೈಸುವ ನೀಲಾಂಬಿಕಾ ತಾಯಿಯವರು ಬಸವಣ್ಣನವರ ಮಾನಸಿಕ ಸ್ತರಕ್ಕೆ ತಮ್ಮ ಮಾನಸಿಕ ಸ್ತರವನ್ನು ಕೊಂಡೊಯ್ಯುದು ಒಂದು ವಿಶೇಷ ಸಂಗತಿ. ಬಸವಣ್ಣನವರ ಜ್ಞಾನತತ್ತ್ವದ ಸತ್‌ಸ್ವರೂಪವೇ ತಾನಾಗುವುದೇ ವಿಚಾರಪತ್ನಿ ಎಂಬುದಕ್ಕೆ ನಿಜಾರ್ಥ ಎಂದು ಅವರು ವ್ಯಾಖ್ಯಾನಿಸುತ್ತಾರೆ. ಅಂತಹ ಉತ್ತುಂಗ ಸ್ಥಿತಿಯನ್ನು ಮುಟ್ಟಿದ ಪತ್ನಿಯಾಗಿ ಅವರು ಸ್ತ್ರೀ ಸಂಕುಲಕ್ಕೆ ಆದರ್ಶ ಎನಿಸಿಕೊಂಡಿದ್ದಾರೆ.

**ಮಡದಿ ಎನಲಾಗದು, ಬಸವಂಗೆ ಎನ್ನನು**
**ಪುರುಷನೆನಲಾಗದು ಬಸವನ ಎನಗೆ**
**ಉಭಯದ ಕುಳವ ಹರಿದು ಬಸವಂಗೆ ಶಿಶುವಾನಾದೆನು**
**ಬಸವನೆನ್ನ ಶಿಶುವಾದನು.**

'ಬಸವಣ್ಣನವರಿಗೆ ತಾನು ಮಡದಿ' ಎಂದು ಹೇಳಲು ಸಾಧ್ಯವಿಲ್ಲ ಎನ್ನುವ ಅವರ 'ಹೆಣ್ಣು ಗಂಡೆಂಬ ಉಭಯ ದೃಷ್ಟಿಯನ್ನು ಕಳೆದುಕೊಂಡು ಮುಕ್ತಗೊಂಡಾಗ 'ಮಡದಿ ಎನಲಾಗದು, ಬಸವಂಗೆ ಎನ್ನನು' ಎನ್ನುವಂತಹ ಉದಾತ್ತ ಚಿಂತನೆಯ ಮನೋಭಾವನೆ ಅಳವಡಲು ಸಾಧ್ಯ' ಎನ್ನುತ್ತಾರೆ. ಭಾರತೀಯ ಆಧ್ಯಾತ್ಮಿಕ ಪರಂಪರೆಯಲ್ಲಿ ಇಂತಹ ಒಂದು ಮಾನಸಿಕ ಪರಿಧಿ ದಾಟಿದಂತಹ ವೈರಾಗ್ಯಪೂರ್ಣ ಅನುಭಾವ ಸ್ಥಿತಿಯನ್ನು ಬಸವಣ್ಣನವರು ಮತ್ತು ನೀಲಾಂಬಿಕಾ ತಾಯಿಯವರ ವೈವಾಹಿಕ ಬದುಕಿನಲ್ಲಿ ಕಾಣಬಹುದು. ಇದು ವೈವಾಹಿಕ ಬದುಕಿನಲ್ಲಿರುವವರೆಲ್ಲರಿಗೂ ಒಂದು ಮಾರ್ಗಸೂಚಿಯ ಆದರ್ಶ ಎಂದು ಉಲ್ಲೇಖಿಸಬಹುದು.

**ಆಧ್ಯಾತ್ಮಾನುಭೂತಿ :**

**ಅತೀತವಡಗಿ, ನಿರಾಲಂಬದ ಮನದ ಮೂರ್ತಿಯಂ ತಿಳಿದು**
**ಮನೋವ್ಯಾಧಿಯಂ ಪರಿಹರಿಸಿಕೊಂಡು,**
**ಭಾವದ ಸೂತಕವಳಿದು ಬ್ರಹ್ಮದ ನೆಮ್ಮುಗೆಯಂ ತಿಳಿದು**
**ಮನ ವಿಶ್ರಾಂತಿಯನೆಯ್ದಿ, ವಿಚಾರದನುಭವವನರಿದು**
**ವಿವೇಕದಿಂದಾನು ವಿಶೇಷಸುಖವ ಕಂಡೆನಯ್ಯಾ**
**ಸಂಗಯ್ಯಾ, ಬಸವನಿಂದಲಿ !**

'ಮನಚಿತ್ತಬುದ್ಧಿಗಳ ಪರಿಧಿಯನ್ನು ದಾಟಿದ ನಿರ್ಭಾವ (ನಿರಾಲಂಬ) ಸ್ಥಿತಿಯಲ್ಲಿ ಮನಚಿತ್ತಬುದ್ಧಿಗಳಿಗೆ ಆಶ್ರಯವಾದ ಪರಮಾತ್ಮ ತತ್ತ್ವದ ನಿರಾಲಂಬದ ಘನ ತತ್ತ್ವವನ್ನು ಕಾಣಬೇಕು. ನಿರ್ಗುಣ-ನಿರಾಕಾರ ಘನ ತತ್ತ್ವದ ಜ್ಞಾನ ಬೆಳಕನ್ನು ಮನದೊಳಗೆ ಬೆಳಗಿಸಿಕೊಂಡಾಗ ಮನದಲ್ಲಿ ತುಂಬಿರುವ ಅಜ್ಞಾನವೆಂಬ ವ್ಯಾಧಿಯನ್ನು

ಪರಿಹರಿಸಿಕೊಳ್ಳಲು ಸಾಧ್ಯ. ಭಾವನೆಗಳಿಂದ ಬಂಧಿತಗೊಂಡಿರುವ ಮನಸ್ಸನ್ನು ಭಾವಾತೀತ ಸ್ಥಿತಿಯ ನಿರ್ವಿಕಲ್ಪ ಸ್ಥಿತಿಯಲ್ಲಿ ನೆಲೆಗೊಂಡಾಗ ಪರಬ್ರಹ್ಮನ ನಿಜನೆಲೆಯನ್ನು ಕಾಣಲು ಸಾಧ್ಯ. ಅಂತಹ ಪರಮಾತ್ಮ ತತ್ತ್ವದ ನಿಜಜ್ಞಾನ ಸ್ಥಿತಿಯ ಅನುಭಾವವನ್ನು ಬಸವಣ್ಣನವರ ಪರಮ ಸಾನ್ನಿಧ್ಯದಿಂದ ಕಂಡು ಸುಖಿಸಿದೆ' ಎನ್ನುವ ನೀಲಾಂಬಿಕಾ ತಾಯಿಯವರು ಅಂತಹ ಆಧ್ಯಾತ್ಮಾನುಭೂತಿಯನ್ನು ಅನುಭಾವಿಸುತ್ತಾರೆ. 'ಏಕಯೇವ ದೇವನೊಬ್ಬನೆ ಶರಣ ಬಸವಯ್ಯ' ಎಂದು ಅವರು ಬಸವಣ್ಣನವರನ್ನು ಧ್ಯಾನಿಸುವುದರ ಮೂಲಕ ಬಸವಣ್ಣನವರು ಪರಮಾತ್ಮ ತತ್ತ್ವದ ಸಾಕಾರ ರೂಪವೇ ಆಗಿದ್ದಾರೆ ಎಂಬುದನ್ನು ಸಾದರಪಡಿಸುತ್ತಾರೆ.

**ಇಷ್ಟಲಿಂಗ ಯೋಗ ಧ್ಯಾನದಲ್ಲಿ ಲಿಂಗೈಕ್ಯ :** ಕಲ್ಯಾಣ ಕ್ರಾಂತಿಯ ಸಂದರ್ಭದಲ್ಲಿ ಅನುಭವ ಮಂಟಪದ ಸಂಪೂರ್ಣ ಹೊಣೆಗಾರಿಕೆ ಹೊತ್ತ ನೀಲಾಂಬಿಕಾ ತಾಯಿಯವರು ಶರಣ ಸಮೂಹಕ್ಕೆ ದಿಕ್ಸೂಚಿಯಾಗಿ ನಿಲ್ಲುತ್ತಾರೆ. ಬಸವಣ್ಣನವರು ನಿರ್ದೇಶಿಸಿದ ಕರ್ತವ್ಯಗಳನ್ನು ಪೂರೈಸಿದ ಅವರು ಬಸವಣ್ಣನವರು ಲಿಂಗಾನುಷ್ಠಾನದಲ್ಲಿದ್ದ ಸ್ಥಳವಾದ ಕೂಡಲಸಂಗಮಕ್ಕೆ ಬರುತ್ತಾರೆ. ಆ ಸಮಯದಲ್ಲಿ ನದಿಗಳು ಪ್ರವಾಹದಿಂದ ಉಕ್ಕಿ ಹರಿಯುತ್ತಿದ್ದ ಕಾರಣ, ಅವರ ಸಾಮೀಪ್ಯಕ್ಕೆ ಸಾಗಲು ಅವರಿಗೆ ಸಾಧ್ಯವಾಗುವುದಿಲ್ಲ. ಸಂಗಮದ ಬಳಿಯೇ ಇರುವ ತಂಗಡಗಿಯಲ್ಲಿ ಅವರು ಉಳಿಯುತ್ತಾರೆ. ಅಷ್ಟರೊಳಗೆ ಗುರುಬಸವಣ್ಣನವರು ಇಚ್ಛಾಮರಣಿಗಳಾಗಿ ಲಿಂಗೈಕ್ಯಗೊಂಡ ಸಂಗತಿ ಬಸವಣ್ಣನವರ ಒಡನಾಡಿಯಾಗಿದ್ದ ಹಡಪದ ಅಪ್ಪಣ್ಣನವರಿಂದ ಅವರು ತಿಳಿಯುತ್ತಾರೆ.

**ಇಪ್ಪೆಯ ಹೂವನನುಗೊಳಿಸಲು ಇಪ್ಪೆ ಹಿಪ್ಪೆಯಾಗಿತ್ತು**<br>
**ಸರ್ಪನ ಶಿರ ಕಂಠದಲ್ಲಿ ಮೂಗುತಿಯ ಸರಗೊಳಿಸಿದೆನಯ್ಯಾ**<br>
**ನಾವಲ್ಲಿದ್ದೆನು, ನಾವಿಲ್ಲಿದ್ದೆನು ?**<br>
**ನಮ್ಮ ನಮ್ಮ ಸಂಸರ್ಗದಲ್ಲಿ ನಿರುಪಮಾಕಾರ ಮೂರ್ತಿಗಳಾಗಿ**<br>
**ನಿರವಯವನೈದಿ ನಿಜಸುಖಿಗಳಾದೆವು**<br>
**ಬಸವನಲ್ಲಿ ಎಮಗೆ ತೆರಪಿಲ್ಲವಯ್ಯಾ, ಅಪ್ಪಣ್ಣಾ**<br>
**ಭಾವಶೂನ್ಯಳು ನಾನು ಸಂಗಯ್ಯಾ.**

ಇಪ್ಪೆಯ ಹೂವನು ಸಂಸ್ಕರಿಸುತ್ತಾ ಸಾಗಿದಾಗ ಇಪ್ಪೆಯು ಹಿಪ್ಪೆಯಾಗಿ ಪರಿವರ್ತನೆಗೊಳ್ಳುತ್ತದೆ. ಹಾಗೆಯೇ ನಾನಾ ವರ್ಣದ ಪ್ರಪಂಚ ವೃತ್ತಿಗಳಿಗೆ ಒಳಗಾಗಿರುವ ಮನಸ್ಸನ್ನು ಸಂಸ್ಕರಿಸುತ್ತಾ ಸಾಗಿದಾಗ ಆ ಮನಸ್ಸೇ ಮಹಾಘನ ಮನವಾಗಿ ರೂಪುಗೊಳ್ಳುತ್ತದೆ. ಪರಿಶುದ್ಧಗೊಂಡ ಶುದ್ಧಾತ್ಮ ಚೈತನ್ಯ ತತ್ತ್ವವು ಷಟ್‌ಚಕ್ರಗಳ ಮೂಲಕ ಪಶ್ಚಿಮ ಚಕ್ರದಲ್ಲಿ ನೆಲೆಗೊಂಡಾಗ, ಪರಮಾತ್ಮ ತತ್ತ್ವದ ದಿವ್ಯದರ್ಶನದನುಭಾವ ಉಂಟಾಗುತ್ತದೆ. ಅಂತಹ ದಿವ್ಯಾನುಭಾವವನ್ನು ಕಂಡು ಪರಮಸುಖಿ ಎನಿಸಿಕೊಂಡಿದ್ದವರು ನೀಲಾಂಬಿಕಾ ತಾಯಿಯವರು. 'ನನ್ನೊಳಗೇ ಬಸವಣ್ಣನವರು ಅಂತರ್ಗತವಾಗಿರುವಾಗ, ಪುನಃ ಹೋಗಿ ಕಾಣುವುದು ಯಾವುದನ್ನ' ಎಂದು ಹಡಪದ ಅಪ್ಪಣ್ಣನವರನ್ನು ಅವರು ಪ್ರಶ್ನಿಸುತ್ತಾರೆ. ತನ್ನಂತರಂಗದಲ್ಲಿಯೇ ಜ್ಞಾನ ಸ್ವರೂಪದಲ್ಲಿ ಇರುವ ಬಸವಣ್ಣನವರನ್ನು ಕಂಡು ಭಕ್ತಿ ಭಾವದಿಂದ ನಮಸ್ಕರಿಸುವುದರ ಮೂಲಕ ಧರ್ಮಪಿತರಿಗೆ ಭಕ್ತಿಯ ನಮನಗಳನ್ನು ಸಲ್ಲಿಸುತ್ತಾರೆ.

ಶ್ರಾವಣ ಮಾಸದ ಪಂಚಮಿಯ ದಿನದಂದು ಬಸವಣ್ಣನವರು ಲಿಂಗೈಕ್ಯಗೊಂಡ ನಂತರದ ಷಷ್ಠಿಯ ದಿನದಂದು ನೀಲಾಂಬಿಕಾ ತಾಯಿಯವರು 'ಇಷ್ಟಲಿಂಗ ಯೋಗ' ಧ್ಯಾನದ ಮೂಲಕ ಲಿಂಗೈಕ್ಯಗೊಳ್ಳುತ್ತಾರೆ. ಅವರು ಲಿಂಗೈಕ್ಯಗೊಂಡ ಪರಮಪುಣ್ಯ ದಿನವನ್ನು ಜನತೆ 'ನೀಲಾಂಬಿಕಾಷಷ್ಠಿ' ಎಂದು ಆಚರಿಸಿಕೊಂಡು ಬರುತ್ತಿರುವುದು ಒಂದು ವಿಶೇಷ. ಅವರ ಲಿಂಗೈಕ್ಯ ಸಂಸ್ಮರಣೆಯ ಸಂದರ್ಭದಲ್ಲಿ ಅವರ ಬದುಕಿನ ಆದರ್ಶಗಳನ್ನು ನಾವು ಬದುಕಿನಲ್ಲಿ ಅಳವಡಿಸಿಕೊಳ್ಳುವ ಪ್ರಯತ್ನ ಮಾಡೋಣ. ಅದುವೇ ಸಂಸ್ಮರಣೆಯ ಮುಖ್ಯ ಉದ್ದೇಶವಾಗಿದೆ. ಅದುವೇ ಆ ತಾಯಿಗೆ ಸಲ್ಲಿಸುವ ಅರ್ಥಪೂರ್ಣ ನಮನಗಳಾಗುತ್ತವೆ.

**ಶ್ರೀವಾಣಿ**

ಸ್ವಾತಂತ್ರ್ಯ ಅರ್ಥವಾಗಬೇಕಾದರೆ, ದೇಶದ ಪ್ರತಿಯೊಬ್ಬ ವ್ಯಕ್ತಿಯೂ, ದೇಶ ಪ್ರೇಮವನ್ನು ಬೆಳೆಸಿಕೊಳ್ಳಬೇಕು. ಈ ಘನ ವ್ಯಕ್ತಿತ್ವವನ್ನು ರೂಪಿಸಿಕೊಂಡಾಗ ಮಾತ್ರ ಸಾಧ್ಯ. ಅದೇ ಅವನು ದೇಶಕ್ಕೆ ನೀಡುವ ಶ್ರೇಷ್ಠ ಕೊಡುಗೆಯೂ ಆಗುತ್ತದೆ.



**ಶರಣಾಂಜಲಿ**

# ಡಾ. ಗಿರಡ್ಡಿ ಗೋವಿಂದರಾಜ ವಿಧಿವಶ

ನಾಡಿನ ಹಿರಿಯ ಸೃಜನಶೀಲ ಸಾಹಿತಿ, ಖ್ಯಾತ ವಿಮರ್ಶಕ, ಡಾ. ಗಿರಡ್ಡಿ ಗೋವಿಂದರಾಜ ಅವರು ಮೇ ೧೧ ರಂದು ಧಾರವಾಡದಲ್ಲಿ ತೀವ್ರಹೃದಯಾಘಾತದಿಂದ ವಿಧಿವಶರಾದರು. ಅವರು ೭೯ ವರ್ಷಗಳ ಬೇವು ಬೆಲ್ಲವನ್ನು ಸಮಚಿತ್ತದಿಂದ ಸವಿದಿದ್ದರು.

ಗದಗ ಜಿಲ್ಲೆ ರೋಣ ತಾಲ್ಲೂಕಿನ ಅಬ್ಬಿಗೇರಿಯಲ್ಲಿ ಸೆಪ್ಟೆಂಬರ್ ೨೨, ೧೯೩೯ ರಲ್ಲಿ ಅಂದಾನಪ್ಪ ಸಂಗವ್ವ ದಂಪತಿಯ ಮಗನಾಗಿ ಜನಿಸಿದ ಗಿರಡ್ಡಿ ಗೋವಿಂದರಾಜ ಕೃಷಿ ಕುಟುಂಬಕ್ಕೆ ಸೇರಿದವರು. ಮಗ ತಮ್ಮ ಕೃಷಿ ಕಾರ್ಯವನ್ನು ಮುಂದುವರಿಸಲಿ ಎಂಬ ಆಶಯವಾಗಿದ್ದರೂ ಸಾಹಿತ್ಯ ಕೃಷಿಯನ್ನು ಕೊನೆಯುಸಿರು ಇರುವವರಿಗೂ ಶ್ರದ್ಧೆಯಿಂದ, ನಿಷ್ಠೆಯಿಂದ ಮಾಡಿದರು. ಹತ್ತನೇ ತರಗತಿಯಲ್ಲಿ ಓದುತ್ತಿರುವಾಗಲೇ 'ಶಾರದಾ ಲಹರಿ' ಎಂಬ ದೀರ್ಘ ಕವಿತೆಯನ್ನು ಬರೆದು ಪ್ರಕಟಿಸುವುದರ ಮೂಲಕ ಸಾಹಿತ್ಯ ಕ್ಷೇತ್ರವನ್ನು ಪ್ರವೇಶಿಸಿದರು.

ಡಾ. ಗಿರಡ್ಡಿ ಗೋವಿಂದರಾಜ ಅವರು ೧೯೬೩ ರಲ್ಲಿ ಇಂಗ್ಲೀಷ್ ಅಧ್ಯಾಪಕರಾಗಿ ವೃತ್ತಿಜೀವನವನ್ನು ಆರಂಭಿಸಿದರು. ಧಾರವಾಡದ ಪ್ರತಿಷ್ಠಿತ ಕರ್ನಾಟಕ ಕಾಲೇಜಿನಲ್ಲಿ, ಗುಲ್ಬರ್ಗಾ ವಿಶ್ವವಿದ್ಯಾಲಯದಲ್ಲಿ ಇಂಗ್ಲೀಷ್ ವಿಭಾಗದಲ್ಲಿ ರೀಡರ್, ಪ್ರಾಧ್ಯಾಪಕರಾಗಿ, ವಿಭಾಗದ ಮುಖ್ಯಸ್ಥರಾಗಿ, ಸಂದರ್ಶಕ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದ್ದರು.

**ಶಿಕ್ಷಣ :** ೧೯೬೨ ರಲ್ಲಿ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಿಂದ ಇಂಗ್ಲೀಷ್‌ನಲ್ಲಿ ಸ್ನಾತಕೋತ್ತರ ಪದವಿ, ೧೯೬೩ ರಲ್ಲಿ ಹೈದರಾಬಾದ ವಿಶ್ವವಿದ್ಯಾಲಯದಿಂದ ಡಿಪ್ಲೋಮಾ ಇನ್ ಇಂಗ್ಲೀಷ್ ಸ್ಟಡೀಸ್, ೧೯೭೦ ರಲ್ಲಿ ಕನ್ನಡದಲ್ಲಿ ಸ್ನಾತಕೋತ್ತರ ಪದವಿ, ೧೯೭೫ ರಲ್ಲಿ ಇಂಗ್ಲೆಂಡಿನ ಲ್ಯಾಂಕೆಸ್ಟರ್ ವಿಶ್ವವಿದ್ಯಾಲಯದಿಂದ ಭಾಷಾಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಯನ್ನು ಪಡೆದಿದ್ದ ಗಿರಡ್ಡಿ ಗೋವಿಂದರಾಜ ಅವರು ೧೯೮೫ ರಲ್ಲಿ ಗುಲ್ಬರ್ಗಾ ವಿಶ್ವವಿದ್ಯಾಲಯದಿಂದ ಶೈಲಿಶಾಸ್ತ್ರ ವಿಷಯದ ಮೇಲೆ ಪಿ.ಎಚ್‌ಡಿ ಪದವಿ ಪಡೆದಿದ್ದರು.

ಸಾಹಿತ್ಯ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡು ಕಾವ್ಯ, ಸಣ್ಣಕಥೆ, ವಿಮರ್ಶೆ, ಸಾಹಿತ್ಯ ಲಲಿತ ಪ್ರಬಂಧ ಅನುವಾದ ಸಂಪಾದನೆ ಮೊದಲಾದ ಪ್ರಕಾರಗಳಲ್ಲಿ ೮೫ ಹೆಚ್ಚು ಮೌಲಿಕ ಕೃತಿಗಳನ್ನು ನೀಡಿ ಸಾಹಿತ್ಯ ಕ್ಷೇತ್ರವನ್ನು ಶ್ರೀಮಂತಗೊಳಿಸಿದ್ದರು. 'ಸಂಕ್ರಮಣ' ಪತ್ರಿಕೆಯ ಸಂಪಾದಕರಾಗಿಯೂ ಸೇವೆ ಸಲ್ಲಿಸಿದ್ದರು.

**ಪ್ರಶಸ್ತಿ-ಗೌರವಗಳು :** ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ, ಕರ್ನಾಟಕ ನಾಟಕ ಅಕಾಡೆಮಿಯ ಗೌರವ ಪ್ರಶಸ್ತಿ, ಅನಕೃ ನಿರ್ಮಾಣ ಸ್ವರ್ಣ ಪ್ರಶಸ್ತಿ, ಬೇಂದ್ರೆ ಫೆಲೋಷಿಪ್, ರಾಜ್ಯೋತ್ಸವ ಪ್ರಶಸ್ತಿ, ಡಾ. ಜಿ.ಎಸ್. ಶಿವರುದ್ರಪ್ಪ ವಿಮರ್ಶಾ ಪ್ರಶಸ್ತಿ, ಕುವೆಂಪು ಭಾಷಾ ಪ್ರಶಸ್ತಿ, ಇಂಗ್ಲೆಂಡಿನ ಲ್ಯಾಂಕೆಸ್ಟರ್ ವಿಶ್ವವಿದ್ಯಾಲಯದಲ್ಲಿ ರಾಷ್ಟ್ರೀಯ ಪ್ರಶಸ್ತಿ, ಅಳ್ವಾಸ ನುಡಿಸಿರಿ ಪ್ರಶಸ್ತಿ, ಬ್ರಿಟಿಷ್ ಕೌನ್ಸಿಲ್ ಶಿಷ್ಯವೇತನ, ದೆಹಲಿಯ ಕೇಂದ್ರ ಸಾಹಿತ್ಯ ಅಕಾಡೆಮಿಯ ಪ್ರವಾಸಾನುದಾನ ಭಾಷಾಶಾಸ್ತ್ರದಲ್ಲಿ ಎಂ.ಎ. ಮಾಡಲು ಯೋಜನೆಯಡಿಯಲ್ಲಿ ಒಡಿಸಾ ರಾಜ್ಯದಲ್ಲಿ ಸಾಹಿತ್ಯಿಕ-ಸಾಂಸ್ಕೃತಿಕ ಪ್ರವಾಸ, ೧೧ನೇ ಗೋರೆಗಾಂವ ವಿಚಾರ ಭಾರತಿ ಸಮ್ಮೇಳನದ ಸಭಾಧ್ಯಕ್ಷತೆ, ೭೯ನೇ ಧರ್ಮಸ್ಥಳದಲ್ಲಿ ಏರ್ಪಡಿಸಿದ್ದ ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ ಮೊದಲಾದ ಪ್ರಶಸ್ತಿ ಗೌರವಗಳಿಗೆ ಭಾಜನರಾಗಿದ್ದರು. ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾಗಿ ಹಲವಾರು ಪ್ರಗತಿಪರ ಯೋಜನೆಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ಅನುಷ್ಠಾನಗೊಳಿಸಿ ವಿದ್ವತ್ ವಲಯದ ಪ್ರಶಂಸೆಗೆ ಪಾತ್ರರಾಗಿದ್ದರೆ.

ಶ್ರೀಮಠದ ಬಗ್ಗೆ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಅಪಾರವಾದ ಭಕ್ತಿ, ಗೌರವವನ್ನಿಟ್ಟುಕೊಂಡಿದ್ದ ಡಾ. ಗಿರಡ್ಡಿ ಗೋವಿಂದರಾಜ ಅವರು ಶ್ರೀಮಠದಲ್ಲಿ ನಡೆದ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ವಿದ್ವತ್‌ಪೂರ್ಣವಾದ ಉಪನ್ಯಾಸ ನೀಡಿ ಪೂಜ್ಯರಿಂದ ಆಶೀರ್ವಾದವನ್ನು ಪಡೆದಿದ್ದರು. ಕನ್ನಡ ಪರಂಪರೆಯ ಹಿರಿಯ ಚೇತನ ಕಣ್ಮರೆಯಾಗಿದೆ. ಅವರು ಅನೇಕ ಜನ ಯುವ ಸಾಹಿತ್ಯಾಸಕ್ತರಿಗೆ ಮಾರ್ಗದರ್ಶನ ನೀಡುತ್ತಿದ್ದರು.

ಡಾ. ಗಿರಡ್ಡಿ ಗೋವಿಂದರಾಜ ಅವರು ನಿಧನದಿಂದ ಸಾಹಿತ್ಯ ಕ್ಷೇತ್ರ ಬರಡಾಗಿದೆ. ಅವರ ಅಗಲಿಕೆಯ ಸಹಿಸುವ ಶಕ್ತಿಯನ್ನು ಅವರ ಕುಟುಂಬಕ್ಕೆ, ಶಿಷ್ಯ ವರ್ಗಕ್ಕೆ ಹಾಗೂ ಅವರ ಆತ್ಮಕ್ಕೆ ಚಿರಶಾಂತಿಯನ್ನು ದಯಾಮಯನಾದ ಭಗವಂತನು ಅನುಗ್ರಹಿಸಲಿ ಎಂದು ಸಿದ್ಧಗಂಗಾ ಪ್ರಾರ್ಥಿಸುತ್ತದೆ.

ಲೇಖನ

# ಹಂಗು-ವರ ಮತ್ತು ಶರಣರು

- ಸ.ರಾ. ಸುಳಕೂಡೆ *

ಮಾನವ ಬದುಕಿನ ಮಹಾಬೆಳಗು ಹಂಗು-ವರಗಳಲ್ಲಿ ವಿಹರಿಸುತ್ತಿರುವುದರಿಂದಲೇ ಮಹಾ ಸಾಧನೆಗಳು ಜರಗುತ್ತಲಿವೆ.ಬದುಕುವ ಕೆಚ್ಚು, ಶೌರ್ಯ, ಸಾಹಸ, ವೈಚಾರಿಕ ಮನೋವೃತ್ತಿ ಸತ್ಯತೆ, ವಿಚಾರ ಪ್ರಿಯತೆ, ಸಹಕಾರಭಾವದ ಸರಳತೆ ಬದುಕಿನಲ್ಲಿ ಹಾಸುಹೋಕ್ಕಾಗದೇ ಹೋಗಿರುವುದರಿಂದ ಎಲ್ಲೆಡೆ ತಲ್ಲಣ, ತಳಮಳಗಳೇ ಹರವಿಕೊಂಡಿವೆ. ಮಾನವ ಬದುಕು ಹಲವು ಹಂಗುಗಳ ಸುತ್ತ ಹೆಣೆದುಕೊಂಡಿದ್ದರೂ ಆದರ್ಶ ಮತ್ತು ತತ್ತ್ವಕ್ಕಾಗಿ ತಾಳ್ಮೆಯಿಂದ ಮುನ್ನುಗ್ಗುವ ಧೀರತ್ವವನ್ನು ಬೆಳೆಸಿಕೊಳ್ಳದೇ ಹೋದರೆ ಸಲ್ಲಲಿತ ಸನ್ಮಾರ್ಗ ದೊರೆಯಲಾರದು. ಮಹಾಭಾರತ ಇದಕ್ಕೊಂದು ಜೀವಂತ ಉದಾರಣೆಯಾಗಿದೆ. ಭೀಷ್ಮನ ಬದುಕು, ದ್ರೋಣಾಚಾರಿ, ಕರ್ಣ ಹಂಗಿನ ಆವರಣದೊಳಗೆ ಸಿಲುಕಿ ಅಪಾರ ಆದರ್ಶಗಳನ್ನು ಮತ್ತು ಶಕ್ತಿಯನ್ನು ವ್ಯರ್ಥಗೊಳಿಸಿಕೊಂಡಿದ್ದು, ಇಂದಿಗೂ ನಿದರ್ಶನವಾಗಿದೆ. 'ಬದುಕು' ಅವತಾರದ ಅವತರಣೆಯಲ್ಲ, ಜಗದೊಳಗೆ ಜನಿಸಿದ ಪ್ರತಿ ವ್ಯಕ್ತಿಗೆ ಪೂರ್ವಜರ ಬಳುವಳಿ-ಸಂಪತ್ತು-ಹಿನ್ನೆಲೆ ಸಿಗುತ್ತದೆ. ಆದರೆ ಇದೇ ಸರ್ವಸ್ವ ಎಂದು ಅಲ್ಲಿಯೇ ನಿಲ್ಲುವುದಿಲ್ಲ. ಬದುಕಿನ ನಿರಂತರತೆ ಒಂದು ಅಗಾಧ ಸಾಹಸ, ಶೌರ್ಯ, ಧೈರ್ಯ ಧೀರತ್ವದಿಂದ ಚಿಮ್ಮುತ್ತದೆ. ಇದೊಂದು ಶಕ್ತಿಯೂ ಹೌದು, ಯುಕ್ತಿಯೂ ಹೌದು, ನಮ್ಮ ನಮ್ಮ ಬದುಕಿನೊಳಗೆ ಹಂಗಿನ ಅರಿವು ಇರಬೇಕು. ಆದರೆ ಆ ಹಂಗು ಬದುಕಿನ ಮೌಲ್ಯಗಳನ್ನು ತಿರುಚುವಂತಿರಬಾರದು ಬದುಕಿಗೆ ಮಾರಕವಾಗಿರಬಾರದು. ಬದುಕು ಬೆಳೆಸುವಲ್ಲಿ ಹಂಗಿನ ಪಾತ್ರವಿದ್ದರೂ ಅದೇ ಪ್ರಗತಿಗೆ, ಬದಲಾವಣೆಗೆ ಬೇಡಿಯಾಗಬಾರದಲ್ಲವೇ ? ಬದುಕಿನಲ್ಲಿ ಹಂಗು ಒಳಸುಳಿಯಾಗಿ ಬೆಳೆಯದಂತೆ ನೋಡಿಕೊಳ್ಳಬೇಕು.



**"ಬಡ ಹಾರುವನೇಸು ಭಕ್ತನಾದರೆಯೂ ನೇಣಿನ ಹಂಗ ಬಿಡ ।**
**ಮಾಲೆಗಾರನೇಸು ಭಕ್ತನಾದರೆಯೂ ಬಾವಿಯ ಬೊಮ್ಮನ ಹಂಗ ಬಿಡ ।**
**ಬಣಜಿಗನೇಸು ಭಕ್ತನಾದರೆಯೂ ಬಟ್ಟಲ ಬೆನಕನ ಹಂಗ ಬಿಡ ।**
**ಕಂಚುಗಾರನೇನು ಭಕ್ತನಾದರೆಯು ಕಾಳಿಕಾದೇವಿಯ ಹಂಗ ಬಿಡ ।**
**ನಾನಾವ ಹಂಗಿನವನಲ್ಲ, ನಿಮ್ಮ ಶರಣರ ಹಂಗಿನವನಯ್ಯಾ**
**ಕೂಡಲ ಸಂಗಮದೇವಾ !"**

ಹಂಗು ವಿವಿಧ ಸ್ತರದಲ್ಲಿ ಹಬ್ಬಿಕೊಂಡು ಬದುಕಿಗೆ ಬಾಧಕವಾಗುತ್ತಿದೆ. ಹಂಗು ವಿಸ್ತಾರವಾಗದಂತೆ ಸದಾ ಉಚ್ಚರವಿರಬೇಕಾದ ಅವಶ್ಯಕತೆ ಇದೆ.

ಬಸವಣ್ಣನವರು ಶರಣರ ಹಂಗಿನವರೆಂದು ಹೇಳುವಲ್ಲಿ ವಿಶಾಲತೆಯ ಮುನ್ನೋಟವಿದೆ. ಇಲ್ಲಿ ಶರಣ ಎಂಬ ಪದದಲ್ಲಿ ಪ್ರಗತಿ, ಸ್ವಾವಲಂಬನೆ, ಸಮಾನತೆ, ಸತ್ಯತೆ ವ್ಯಕ್ತಗೊಂಡಿದೆ. ಇದಲ್ಲದೆ ಸ್ವತಂತ್ರ ಧೀರತ್ವದ ಸಂಚಲನವಿದೆ. ವಿಶಾಲ ಮನೋಭೂಮಿಕೆಯಲ್ಲಿ ಯಾರ ಹಂಗಿಗೂ ಒಳಗಾಗದ ಛಲವಂತಿಕೆ ಇದೆ. ನಾವು ಹಂಗು ಆಶ್ರಯವಿಲ್ಲದೆ ಬದುಕಲಾಗದು. ಹಲವು ನಿಟ್ಟಿನ ಸಹಾಯ ಮತ್ತು ಸಹಕಾರದಿಂದಲೇ ಬದುಕು ರೂಪಗೊಳ್ಳುತ್ತದೆ. ವಿಭೀಷಣ ಹಂಗಿನಿಂದಲೇ ಬದುಕಿದವನಾದರೂ ಮೌಲ್ಯಕ್ಕೆ ಮಹತ್ವ ಕೊಟ್ಟು ಸತ್ಯದ ಕಡೆ ಸೇರಿಕೊಂಡಿದ್ದು, ಇತಿಹಾಸವೇ ಆಗಿದೆ.

* ೧೬೧೯, ರಾಮತೀರ್ಥನಗರ, ಬೆಳಗಾವಿ-೧೬



ಶೋಷಣೆ, ದಬ್ಬಾಳಿಕೆ, ದರ್ಪ, ಅಧರ್ಮದೆಡೆ ಹಂಗು ಎಂದುಕೊಂಡು ಸುಮ್ಮನಿರುವುದು, ಬೆಂಬಲಕ್ಕೆ ನಿಲ್ಲುವುದು ಅಕ್ಷಮ್ಯ ಅಪರಾಧದಲ್ಲಿ ಭಾಗವಹಿಸಿದಂತೆ ಸರಿ.

ಶರಣ ಸಂಸ್ಕೃತಿಯು 'ವರ' ಅವತಾರದಾಚೆ ಬೆಳೆದ ವಿಶಿಷ್ಟ ಸಂಸ್ಕೃತಿಯಾಗಿದೆ. ಶರಣರು ಸಮಾಜದಲ್ಲಿ ಸಮ್ಮಿಳಿತಗೊಂಡು ಬದುಕನ್ನು ನಿರ್ವಹಿಸುತ್ತ ದಿವ್ಯತೆಯ ಸೊಬಗನ್ನು ಇಹಕ್ಕೆ ತಂದು ಕೊಟ್ಟವರಾಗಿದ್ದಾರೆ. ಜಗದ ಬದುಕಿಗೆ ಅವತಾರ ಅಗತ್ಯವೆಂಬ ನಕಾರಾತ್ಮಕ ಧೋರಣೆಯನ್ನು ಹಿಮ್ಮೆಟ್ಟಿಸಿರುವ ಶರಣ ಸಂಸ್ಕೃತಿಯು ಕಾಯಕ, ದಾಸೋಹ, ಅನುಭಾವದಿಂದ ಸಕಲವನ್ನು ಪಡೆಯಲು ಸಾಧ್ಯವೆಂಬ ಸಂಗತಿಯನ್ನು ಗತಿಶೀಲ ಗೊಳಿಸಿದೆ. ಹೀಗಾಗಿ ಇಂದಿನ ವೈಜ್ಞಾನಿಕ, ವೈಚಾರಿಕ ಯುಗದಲ್ಲೂ ಪ್ರಸ್ತುತಗೊಂಡಿದೆ.

ಶರಣ ಸಂಸ್ಕೃತಿ ಸರಳ ಜೀವನದ ಸೂತ್ರವಾಗಿದೆ. ಇಹದ ಬದುಕಿಗೆ ಸ್ಪಂದಿಸಿರುವ ಶರಣರು ಕಾಯಕವೇ ಕೈಲಾಸವೆಂದು ತೋರಿಸಿಕೊಟ್ಟಿದ್ದಾರೆ. ಇದೆಲ್ಲವೂ ಪವಾಡವಾಗಲಿ, ವರದ ಮಹಿಮೆ ಎಂದು ಎಲ್ಲಿಯೂ ಹೇಳಿಕೊಂಡು ತಿರುಗಲಿಲ್ಲ. ಮತ್ತೊಬ್ಬರಿಗೆ ಮಹಾನ್ ರೆಂದು ಬಿಂಬಿಸಿಕೊಳ್ಳಲಿಲ್ಲ. 'ಬದುಕು' ಸಹ್ಯ ಸುಂದರಗೊಳ್ಳುವ ಮಾರ್ಗ ಇಷ್ಟಲಿಂಗದಲ್ಲಿ ನೆಚ್ಚಿಕೆ ಇಟ್ಟುಕೊಂಡು ಬಾಳಿದರು. ಅವರ ಜೀವನ ಕ್ರಮವು ಬದುಕಿನ ಅದಮ್ಯ ಅನುಭವಗಳ ರಾಶಿಯಾಗಿದೆ. ಜಗತ್ತಿನ ಇಷ್ಟೊಂದು ಹೃದಯವಂತರು ಕೂಡಿಕೊಂಡು ಬದುಕಿನ ಚಿಂತನೆ, ಬದಲಾವಣೆಯ ಚಿಂತನೆಗೈದ ಸಂಗತಿ ಇಂದಿಗೂ ಕಾಣ ಸಿಗಲಾರದೆಂಬ ಮಾತಿಗೆ ಪ್ರತಿ ಮಾತು ಇನ್ನೊಂದು ಸಿಗಲಾರದು. ಅಸಂಖ್ಯಾತರು ಸತ್ಯ ಶುದ್ಧ ಕಾಯಕದ ಮೂಲಕ ಮಹತ್, ಮಹಾನತೆ ಸಾಧಿಸಿಕೊಂಡಿದ್ದು, ಯಾರ ಹಂಗು-ವರದ ಫಲವಾಗಿರದೆ ಸ್ವ-ಸಾಧನೆಯ ಪ್ರಯೋಗವಾಗಿದೆ. ಸಾಮಾನ್ಯರೂ ಬದುಕುವ ಸರಳ ಸೂತ್ರವಾಗಿದೆ.

೧೨ನೇ ಶತಮಾನದಲ್ಲಿ ಬಸವಣ್ಣನವರು ಬದುಕಿನ ಸಾರಸತ್ವವನ್ನು ಕಾಯಕ, ದಾಸೋಹ, ಅನುಭಾವ ನೆಲೆಯೊಳಗೆ ಸಶಕ್ತಗೊಳಿಸಿದರು. ಇದು ಸರ್ವ ಸಮಾನತೆಯ ಹೆಗ್ಗುರುತಾಗಿ ಅನೇಕರನ್ನು ಆಕರ್ಷಿಸಿ ಆಚರಣೆಗೂ ಬಂದಿತು. ಇದೆಲ್ಲ ಪ್ರತಿಯೊಬ್ಬ ಶರಣರ ಕಾಯಕ ನಿಷ್ಠೆಯಿಂದ ಸಾಧ್ಯವಾಯಿತು. ಕಾಯಕವು ಮಾನವ ಬದುಕಿನ ಮಾರ್ಗವಾದಾಗ ವಾಮ ಮಾರ್ಗಗಳು ಮುಚ್ಚುತ್ತವೆ.

**"ನಾನಾ ಸ್ಥಾನಂಗಳಲ್ಲಿ ಬಂದು ಕುಳ್ಳಿರ್ದುದು**
**ತೆರಳುವುದೆ ಅಯ್ಯಾ:**
**ಉಭಯಕುಳಕ್ಕಲ್ಲದೆ ತೆರಳದು**
**ಬೀದಿಯಲ್ಲಿ ಬಿದ್ದ ಶಿಶುವನು**
**ಹೆತ್ತ ತಾಯಿ ಹತ್ತಿರ ಬಂದು ಎತ್ತುವಂತೆ !**

ಎನ್ನನಾರು ಜನ್ಮಕ್ಕೆ ತಂದು ಅಘೋರ ನರಕದಲ್ಲಿಕ್ಕಿದುದ ನಾ ಬಲ್ಲೆ; ಕೂಡಲ ಸಂಗಮದೇವಾ, ನಿಮ್ಮ ಹಂಗೇನು ? ಹರೆಯೇನು ? ಅನುಭವ ಲಿಂಗ ಜಂಗಮದ ಮರೆಹೊಕ್ಕು ಬದುಕಿದೆನು."

ಬಸವಣ್ಣನವರು 'ಬದುಕಿನ' ಮಹತ್ವ ಕಾಯಕ ನಿಷ್ಠೆಯಲ್ಲಿ ಇರುವುದನ್ನು ತೋರಿಸಿದರಲ್ಲದೆ ಪ್ರತಿಯೊಬ್ಬರು ಸ್ವಾಭಿಮಾನಿಗಳಾಗಿ ಸ್ವಾವಲಂಬಿಗಳಾಗಿ, ವಿವೇಚನಾಶೀಲರಾಗಿ ಬದುಕಲು ಇರುವ ಪರಧಿಯನ್ನು ವಿಸ್ತರಿಸಿದರು. ಈ ಪ್ರಯೋಗವು ಹಂಗಿನ, ವರದ ಸಂಸ್ಕೃತಿಯನ್ನು ಹಿಂದಕ್ಕೆ ತಳ್ಳಿತಲ್ಲದೆ ಅರಿವೇ ಗುರುವಾಗಿ, ಕಾಯಕವೇ ಕೈಲಾಸವಾಗಿ, ಸಕಲರೂ ಒಂದೇ ಎಂಬ ವಿಶಾಲತೆಯಾಗಿ ವಿಸ್ತರಗೊಂಡಿತು. ಇಂಥ ವಿಸ್ತಾರ, ವಿಹಂಗಮ, ಬಯಲು-ಬಯಲಿನಲ್ಲಿ ಹಂಗು-ವರಕ್ಕೆ ಸ್ಥಾನವೇ ಇಲ್ಲ. ಇಲ್ಲಿ ಎಲ್ಲವೂ ಕಾಯಕಮಯ, ನಡೆ-ನುಡಿಯಲ್ಲಿ ಐಕ್ಯತೆಯೊಂದಿಗೆ ಶಿವಮಯವಾಗಿ ನಿರ್ಮಲಗೊಂಡಿತ್ತು. ಮಾನವ ಬದುಕು, ಬಾಳು, ಸರ್ವ ಸುಂದರವಾಗಲು ವರದ ಅಥವಾ ಅವತಾರದ ಹಂಗು ಅಗತ್ಯವಿಲ್ಲೆಂಬುದು ಸರಳ ಸಿದ್ಧಾಂತವಾಗಿ ಕಲ್ಯಾಣ ನಾಡಿನ ತುಂಬ ಪಸರಿಸಿಕೊಂಡಿತು. ಕಲ್ಯಾಣ ನಾಡಿನಲ್ಲಿ 'ಬೇಡುವವರಿರಲಿಲ್ಲ' ಎಂಬ ಪ್ರತೀತಿ ಶ್ರಮ ಸಂಸ್ಕೃತಿಯ ದ್ಯೋತಕವಾಗಿದೆ.

ಹಂಗು-ವರಗಳೆಂಬ ಬದುಕಿನ ವಿರೋಧಿ ತತ್ತ್ವಗಳು ಸಿದ್ಧಾಂತದ ರೂಪ ತಾಳಿಕೊಂಡು ಮಾನವ ಬದುಕಿಗೆ ಇರಬೇಕಾದ ಛಲಗಾರಿಕೆಯನ್ನು ನಿವಾಳಿಸುತ್ತಿರುವುದು ವಿವೇಚನೆಯ ಸಂಗತಿಯಾಗಿದೆ. ಮಾನವ ಬದುಕಿನ ಎಲ್ಲ ಆಯಾಮಗಳನ್ನು ಬಳಸಿಕೊಂಡಿರುವ ಶರಣರು ಸ್ವತಂತ್ರ ಧೀರರಾಗಿ ಬೆಳಗಿದ್ದು ಸಾರ್ಥಕ ಬದುಕಿನ ಸಂಕೇತವಾಗಿದೆ. ಶರಣ ಜೀವನ ಸಜ್ಜನ ಜೀವನವಾಗಿರುವುದರಿಂದ ಎಲ್ಲೆಡೆ ಮನ್ನಣೆಗೆ ಪಾತ್ರವಾಗಿರುವುದು ಸಹಜವಾಗಿದೆ.

ಚಿಂತನೆ

# ಕಾಯಕವೇ ಕೈಲಾಸ

- ದೊಡ್ಡಬಾಣಗೆರೆ ಪ್ರಕಾಶಮೂರ್ತಿ *



ಬಸವಣ್ಣನವರು ಒಬ್ಬ ಆದರ್ಶ ಪ್ರವರ್ತಕ. ಸತ್ಯ ವಿಚಾರದ ಸತ್ವಭರಿತ ತತ್ತ್ವದ ನೀತಿಭೇರಿಯನ್ನು ಮೊಳಗಿಸಿ ಜನಮನ ಮುಟ್ಟಿಸಿ ಹೆಸರಾದ ಪ್ರಖ್ಯಾತ ವಚನಕಾರ. ಅವರ ಜೀವಿತಾವಧಿಯ ಕಾಲಮಾನ ೧೨ನೇ ಶತಮಾನ. ಆಗಿನ ಜನಮನದಲ್ಲಿ ಹುದುಗಿದ್ದ ನಿತ್ಯ ನಡವಳಿಕೆಗಳೆಲ್ಲ ಬಳಕೆಯಾಗುತ್ತಿದ್ದ ಜನಜೀವನದ ಬುದ್ಧಿಶಕ್ತಿ ಅಣ್ಣನವರ ಮಾತುಗಳ ನುಡಿಗಣದಲ್ಲಿ ಭೋರಿಡುತ್ತದೆ. ಮಾನವೀಯತೆಯ ತಾತ್ತ್ವಿಕ ಚೆಲುವಿನ ಮನುಕುಲದ ಸೃಜನಶೀಲ ಮೌಲ್ಯವನ್ನು ಇವರದೇ ಆದ ಸರಳತೆಯ ವಚನಶೈಲಿಯಲ್ಲಿ ಎತ್ತಿಹಿಡಿದು ಚಿತ್ರೀಕರಿಸುತ್ತದೆ. ಸಮಾಜದ ರಾಜ-ಮಂತ್ರಿ, ಬಡವ-ಬಲ್ಲಿದ, ಶ್ರಮಿಕ-ಸೋಮಾರಿ - ಎಲ್ಲರ ನಡವಳಿಕೆಗಳು ಕೂಡ ಈ ಚಿತ್ರಣದಲ್ಲಿ ಓದುಗನ ಕೇಳುಗನ ಮತಿ ಮುಟ್ಟುತ್ತವೆ. ಸಮಾಜದ ಓರೆಕೋರೆಗಳ ವೈಭವಯುತ ನಿತ್ಯಪಥದ ಸತ್ಯ ಚಿತ್ರಣಗಳು ಕಣ್ಮಣಗಳಿಗೆ ತಾಗುತ್ತವೆ. ಬದುಕಿನ ಸ್ವಚ್ಛತೆಯ ನಿಚ್ಚಳದ ಹಾದಿಗೆ ತಂದು ನಿಲ್ಲಿಸುತ್ತವೆ. ನಡವಳಿಕೆಗಳಲ್ಲಿ ಎಡವಿದ ಅಪರಾಧಗಳ ಚಿತ್ರಣ ಇಲ್ಲಿ ಬೆಳಕಾಗಿರುತ್ತದೆ. ಬಾಳ್ವೆಯ ಗುಟ್ಟಿನ ಬದುಕಿನ ಸಮಗ್ರ ಚಿತ್ರಗಳ ಈ ಬೆಳಕಿನ ರೂಪುರೇಖೆಗಳು "ಕಾಯಕವೇ ಕೈಲಾಸ"ವೆಂಬ ತತ್ತ್ವದ ನೀತಿಪಾಠವನ್ನು ಸಾರುತ್ತವೆ.

ಇವರ ವಚನಸುಧೆ ಮೇಲುಕೀಳುಗಳ ವಾಸನೆಯ ಸದ್ದಡಗಿಸುತ್ತದೆ. ಸಮಾಜದ ನಿತ್ಯಜೀವನಕ್ಕೆ ಅಗತ್ಯವಾದ ಸಮಾನತೆಯ ಮಂತ್ರಭೇರಿಯನ್ನು ಮೊಳಗಿಸುತ್ತದೆ. ಜಾತಿ ಮತ ಪಂಥಗಳ ಗೋಜನ್ನು ದೂರ ಮಾಡುತ್ತದೆ. ಮನುಕುಲದ ಹೊಂದಾಣಿಕೆಯ ಸಾಮರಸ್ಯ ನಡವಳಿಕೆಗಳ ಚೆಲುವನ್ನು ಕಣ್ಮನಗಳಿಗೆ ತಾಗಿಸುತ್ತದೆ. ಬಾಳಿನ ಆಶಾದಾಯಕ ಹಂಬಲಗಳನ್ನು ಎದುರಿಟ್ಟು, ಬದುಕಿಗೆ ಅಗತ್ಯವಾದ ಪೋಷಕಾಂಶಗಳನ್ನು ದೊರಕಿಸುತ್ತದೆ. ಭಿನ್ನಭಾವಗಳನ್ನು ದೂರತಳ್ಳಿ ಸೌಜನ್ಯಶೀಲ ಸೌಹಾರ್ದಮಯ ಭಾವುಕತೆಗಳಿಗೆ ಸ್ಪಂದಿಸಿ ಬದುಕಿನ ಗಾಂಭೀರ್ಯತೆಯ ಮೆರುಗನ್ನು ಎದುರು ಸಲ್ಲಿಸುತ್ತದೆ. ಸುಖೀರಾಜ್ಯದ ಸೀಮೆಗೆ ಕರೆದೊಯ್ದು ಬಾಳ್ವೆಯ ಸದ್ಗತಿಪಥಕ್ಕೆ ಮಾರ್ಗದರ್ಶನವಾಗುತ್ತದೆ. ಅನುಭವದ ಪ್ರಾಯೋಗಿಕ ಮೆಲುಕುಗಳನ್ನು ತಮ್ಮ ವಚನಗಳಲ್ಲಿ ಬೆರಳು ಮಾಡಿ ತೋರಿ ಅರಿವಿನ ಪ್ರಜ್ಞೆಯನ್ನು ಮೂಡಿಸುತ್ತದೆ. ಪಾಲಿಗೆ ಬಂದ ವೃತ್ತಿಯನ್ನು ಜಾಗರೂಕತೆಯಿಂದ ಸಕ್ರಮ ನಿರ್ವಹಿಸಿ ಯಶ ಕಾಣುವ ಹುರುಪು ಉತ್ಸಾಹಗಳನ್ನು ತುಂಬುತ್ತದೆ.

"ಸನ್ನಡೆ ಸನ್ನುಡಿ ಸದ್ಭಾವಗಳನ್ನು ಬದುಕಿನ ನಡವಳಿಕೆಗಳಲ್ಲಿ ಪ್ರಾಯೋಗಿಕವಾಗಿ ಆಚರಣೆಗೆ ತಂದುಕೊಂಡಾಗ, ಎಲ್ಲಾ ಬಾಳ್ವೆಗಳು ನಲಿವು-ಗೆಲುವುಗಳಿಂದ ವೈಭವಿಸುತ್ತವೆ. ಸೌಜನ್ಯ ಸೌಹಾರ್ದಗಳು ಹಾಸುಹೊಕ್ಕಾಗಿ ಬೆಳೆಯುತ್ತವೆ. ಪರಿಸರದ ನೋವು-ನಲಿವುಗಳಿಗೆ ಸ್ಪಂದಿಸುತ್ತವೆ. ಸಾಮಾಜಿಕ ಹೊಣೆ ಹೊತ್ತು ಸಮಸ್ಯೆಗಳನ್ನು ಹೋಗಲಾಡಿಸುತ್ತವೆ. ಸುಖೀರಾಜ್ಯ

* # ೪, ಗೀತಾ ನಿಲಯ, ೭ನೇ ಕ್ರಾಸ್, ರಾಜೇಂದ್ರ ನಗರ, ಚಿತ್ರದುರ್ಗ-೫೭೭೫೦೧



ಸೀಮೆಯತ್ತ ಕರೆದೊಯ್ಯುತ್ತದೆ. ಕಲ್ಯಾಣಕರ ಸೇವೆಯಲ್ಲಿ ತೊಡಗಿಸುತ್ತವೆ. ಬದುಕಿನ ಯಶಸ್ಸಿಗೆ ಮಾರ್ಗದರ್ಶಿಯಾಗಿ ಸರ್ವತೋಮುಖ ಏಳಿಗೆಗೆ ನಾಂದಿಯಾಗುತ್ತದೆ. ಭಕ್ತಿ-ಭಾವಗಳು ಮೈವೆತ್ತು ಜ್ಞಾನದ ಕಾರಣಗಳು ವರ್ಧಿಸುತ್ತವೆ. ಅಂತಿಮವಾಗಿ ಮರೆಯಾಗಿ ಶಿವನ ಪಾದದಡಿಯಲ್ಲಿ ಸೇರಿ ಮುಕ್ತಿ ಪಡೆಯಲು ಸಹಕಾರ ನೀಡುತ್ತವೆ" ಎಂಬ ಸವಿಸ್ತಾರ ಜ್ಞಾನಕೋಶ ಇವರ ವಚನಸುಧೆಯಲ್ಲಿ ದೊರಕುತ್ತದೆ. "ಆಚಾರವೇ ಸ್ವರ್ಗ ಅನಾಚಾರವೇ ನರಕ" ಬಿಚ್ಚು ನುಡಿಯಲ್ಲಿ ಎಂಬ ನೇರ ಅಭಿಪ್ರಾಯವನ್ನು ಎದುರಿಡುತ್ತದೆ" ಆಕಾಶವನ್ನು ನೋಡಲು ನೂಕುನುಗ್ಗಲೇಕೆ?" ಎಂದು ಗಾದೆ ಮಾತು ಎಚ್ಚರಿಸುವಂತೆ ಮುಕ್ತಿ ಮಾರ್ಗದೊರಕಿಸಿಕೊಂಡು ಕೈಲಾಸ ಕಾಣಿಸೋ ನಮ್ಮ ದೈನಿಕ ದಿನಚರಿಗಳೇ ಪರಿಪೂರ್ಣ ಮಾರ್ಗದರ್ಶಿಗಳೆಂಬ ಸರಳ ಆದರ್ಶ ನೀತಿಯನ್ನು ಸ್ಪಷ್ಟವಾಗಿ ಎದುರಿಸುತ್ತವೆ.

ನಾವು ಮಾಡುವ ನಿತ್ಯಕೃತಿಗಳಲ್ಲಿ ಸಾತ್ವಿಕತೆಯಿದ್ದರೆ ಸೇವಾನಿಷ್ಠೆ ಸುಳಿದಾಗ ಮಾಡುವ ನೀಡುವ ನಿಜಗುಣವುಳ್ಳೊಡೆ ಕೊಡಿಕೊಂಬನು ನಮ್ಮ ಕೂಡಲ ಸಂಗಮದೇವಾ" ಎಂಬಂತೆ ಅಲ್ಲಿ ದೈವ (ಶಿವ) ಸಾನ್ನಿಧ್ಯ ಎಲ್ಲರಿಗೂ ದೊರಕುತ್ತದೆ. ಮಾನವ ತನ್ನ ನಿತ್ಯ ಕಾಯಕದಲ್ಲೇ ಕೈಲಾಸವನ್ನು ಕಾಣಬಹುದೆಂಬ ಒಂದು ಸಾತ್ವಿಕ ನಿದರ್ಶನ ಎದುರಾಗಿ ತಾತ್ವಿಕತೆಯ ಗುಟ್ಟು ಬೆಳಕಾಗುತ್ತದೆ. ಆಶಾದಾಯಕ ಅಭಿಪ್ರಾಯ ಮನಸ್ಸಿಗೆ ಮುಟ್ಟಿ ಕ್ರಿಯಾತ್ಮಕ ಚಟುವಟಿಕೆಗಳಲ್ಲಿ ತೊಡಗಿಸುತ್ತದೆ. ರಾಶಿಯಾಗಿ ಶೋಭಿಸುವ ಇವರ ವಚನ ರಾಶಿ ಬದುಕಿನ ವಿವಿಧ ಚುಟವಟಿಕೆಗಳಿಗೂ ಮಾತು-ಮನ-ಕ್ರಿಯೆಗಳನ್ನು ಚುರುಕುಗೊಳಿಸುತ್ತದೆ. ಬೆಳಕಿನ ಸೌಗಂಧವನ್ನು ಚೆಲ್ಲಿ 'ಕಾಯಕವೇ ಕೈಲಾಸ'ವೆಂಬ ಜಾಗೃತ ನೀತಿಭೇರಿಯನ್ನು ಮೊಳಗಿಸುತ್ತದೆ. ಬಹುದೂರದ ಸಂಗತಿಗಳನ್ನು ನಮ್ಮ ನಿತ್ಯ ಅನುಭವದ ಪರಿಪಾಠಗಳನ್ನು ಹೆಸರಿಸಿ ನೇರವಾಗಿ ಎದುರಿಡುತ್ತದೆ. ಆಶಾದಾಯಕ ಕೊಡುಗೆಗಳು ಇವರ 'ವಚನರಾಶಿ'ಯಲ್ಲೇ ಸರಳವಾಗಿ ದೊರೆಕಿಸುತ್ತವೆ. ಕಾಯಕದ ಪರಿಣಾಮಕಾರಿ ಚಿತ್ರವನ್ನು ಎದುರಿಟ್ಟು ಶ್ರದ್ಧೆ ಭಕ್ತಿ ವಿಶ್ವಾಸಗಳ ದೃಢಚಿತ್ರದ ಕಾಯಕದಿಂದಲೇ ಕೈಲಾಸವೆಂಬುದನ್ನು ಸಾಕ್ಷೀಕರಿಸುತ್ತವೆ.

ಶರಣಾಂಜಲಿ



## ಡಾ. ಹೆಚ್.ಸಿ. ನಾಗಭೂಷಣಸ್ವಾಮಿ ವಿಧಿವಶ

ಬೆಂಗಳೂರು ಸರ್ಕಾರಿ ವೈದ್ಯಕೀಯ ಮಹಾವಿದ್ಯಾಲಯದಲ್ಲಿ ಸರ್ಜರಿ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ ನಿವೃತ್ತರಾಗಿದ್ದ ಡಾ. ಹೆಚ್.ಸಿ. ನಾಗಭೂಷಣಸ್ವಾಮಿ ಅವರು ಮೇ ೭ ರಂದು ವಿಧಿವಶರಾದರು ಎಂದು ತಿಳಿಸಲು ವಿಷಾದಿಸುತ್ತೇವೆ. ಅವರಿಗೆ ೮೭ ವರ್ಷವಾಗಿತ್ತು.

ಬಸವಾದಿ ಶರಣರ ಆದರ್ಶಗಳನ್ನು ಮೈಗೂಡಿಸಿಕೊಂಡಿದ್ದ ಡಾ. ನಾಗಭೂಷಣ ಸ್ವಾಮಿಯವರು ವೃತ್ತಿಯಲ್ಲಿ ಶ್ರದ್ಧೆ, ನಿಷ್ಠೆ, ಪ್ರಾಮಾಣಿಕತೆಯನ್ನು ಅಳವಡಿಸಿಕೊಂಡು, ದೀನ-ದಲಿತರು, ಬಡವರ ಸೇವೆಯಲ್ಲಿ ತೃಪ್ತಿ, ಸಂತೋಷವನ್ನು ಕಂಡಿದ್ದರು. 'ವೈದ್ಯೋ ನಾರಾಯಣ' ಎಂಬ ಸೂಕ್ತಿಗೆ ಜ್ವಲಂತ ನಿದರ್ಶನವಾಗಿದ್ದರು. ಬೋಧನೆ, ಸಂಶೋಧನೆಯಲ್ಲಿ ತಮ್ಮ ಜೀವನವನ್ನೇ ಮುಡುಪಾಗಿಟ್ಟಿದ್ದ ಶ್ರೀಯುತರು ವಿದ್ಯಾರ್ಥಿಗಳಿಗೆ ಆದರ್ಶ ಗುರುಗಳಾಗಿದ್ದರು. ವೈದ್ಯಕೀಯ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಹಲವಾರು ಸಮ್ಮೇಳನಗಳಲ್ಲಿ, ಕಾರ್ಯಾಗಾರಗಳಲ್ಲಿ, ವಿಚಾರ ಸಂಕೀರ್ಣಗಳಲ್ಲಿ ಭಾಗವಹಿಸಿ ವಿದ್ವತ್ ಪೂರ್ಣ ಉಪನ್ಯಾಸ ನೀಡಿದ್ದರು.

ಶ್ರೀ ಸಿದ್ಧಗಂಗಾ ಮಠ ಹಾಗೂ ಪದ್ಮಭೂಷಣ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಸ್ವಾಮಿಗಳವರ ಬಗ್ಗೆ ಅಪಾರವಾದ ಗೌರವ, ಭಕ್ತಿಯನ್ನಿಟ್ಟುಕೊಂಡಿದ್ದ ಡಾ. ನಾಗಭೂಷಣ ಸ್ವಾಮಿಯವರು ತಮ್ಮ ಸ್ನೇಹಿತರೊಂದಿಗೆ ಸೇರಿ ಮಕ್ಕಳಿಗೆ ಬೆಡ್‌ಶೀಟ್‌ಗಳನ್ನು ತಂದು ಕೊಡುವ ಮೂಲಕ ತಮ್ಮ ಔದಾರ್ಯವನ್ನು ಮೆರೆದಿದ್ದರು. ಉದಾರವಾಗಿ ಆರ್ಥಿಕ ನೆರವು ನೀಡುವುದರ ಮೂಲಕ ಧನ್ಯತೆಯನ್ನು ಪಡೆದಿದ್ದರು. ವೃತ್ತಿಯಲ್ಲಿ ದೇವರನ್ನು ಕಾಣುತ್ತಿದ್ದ ಅವರು ತಮ್ಮ ದೇಹವನ್ನು ರಾಮಯ್ಯ ವೈದ್ಯಕೀಯ ಕಾಲೇಜಿಗೆ ದಾನ ಮಾಡುವುದರ ಮೂಲಕ ಸಾರ್ಥಕತೆಯನ್ನು ಹೊಂದಿದ್ದಾರೆ. ಶ್ರೀಯುತರ ಅಗಲಿಕೆಯಿಂದ ಸಮಾಜಕ್ಕೆ, ವೈದ್ಯಕೀಯ ಕ್ಷೇತ್ರಕ್ಕೆ ಭರಿಸಲಾಗದ ನಷ್ಟವಾಗಿದೆ. ಅವರ ಆತ್ಮಕ್ಕೆ ಚಿರಶಾಂತಿಯನ್ನು, ಅವರ ಕುಟುಂಬದವರಿಗೆ ಅಗಲಿಕೆಯ ನೋವನ್ನು ಸಹಿಸುವ ಶಕ್ತಿಯನ್ನು ದಯಮಯನಾದ ಭಗವಂತ ಹಾಗೂ ಸಿದ್ಧಗಂಗಾ ಗುರು ಪರಂಪರೆ ನೀಡಲಿ ಎಂದು ಸಿದ್ಧಗಂಗಾ ಪ್ರಾರ್ಥಿಸುತ್ತದೆ.







ಚಿಂತನೆ

# ಕೋಪ-ತಾಪಗಳು ವ್ಯಕ್ತಿತ್ವಕ್ಕೆ ಮಾರಕ

- ಡಾ. ರಾಜಶೇಖರ ಜಮದಂಡಿ *

ಕೋಪ ಬದುಕಿಗೆ ಮಾರಕವಾದರೆ ಶಾಂತಿ-ಸಮಾಧಾನಗಳು ಪ್ರೇರಕವಾಗಿರುತ್ತವೆ. ಮನುಷ್ಯನಿಗೆ ಕೋಪದ ತಾಪ ವಿಪರೀತವಾದರೆ ತನ್ನ ಅಸ್ತಿತ್ವವನ್ನೇ ಕಳೆದುಕೊಳ್ಳುತ್ತಾನೆ. ಅರಿಷಡ್ವರ್ಗಗಳಲ್ಲಿ ಒಂದಾದ ಕೋಪವು ಸರ್ವ ಅನರ್ಥಕ್ಕೂ ಮೂಲವಾಗಿದೆ. ದೌರ್ಬಲ್ಯದ ಸಂಕೇತವಾಗಿರುವ ಕೋಪವು ಮುಖದ ಒಟ್ಟಾರೆ ಸೌಂದರ್ಯವನ್ನು ಹಾಳು ಮಾಡುತ್ತದೆ. ಕೋಪ ಬಂದವರ ಮುಖವು ಹಾವಿನಂತೆ ಬುಸುಗುಡುತ್ತಿರುತ್ತದೆ. ಕಣ್ಣುಗಳು ಕೆಂಪಾಗಿ, ಮೂಗಿನ ಹೊಳ್ಳೆಗಳು ಅಗಲವಾಗಿ, ಹುಬ್ಬುಗಳೆರೆಡು ಗಂಟಾಗಿ, ಹಲ್ಲು ಕಡಿಯುತ್ತಾ ಕೋಪದಲ್ಲಿ ಮುಳುಗಿದರೆ ತಾವೂ ವಿವೇಕವನ್ನು ಕಳೆದುಕೊಂಡು ಅವಮಾನಕ್ಕೊಳಗಾಗಿ ಮತ್ತೊಬ್ಬರನ್ನು ಅಪಮಾನಕ್ಕೊಳಗಾಗಿಸುತ್ತಾರೆ. ಗಳಿಸಿದ ವಿದ್ಯೆ-ಬುದ್ಧಿಯನ್ನು ಕೋಪದ ಕೈಗೆ ಕೊಟ್ಟಾಗ ಆಡಬಾರದ ಮಾತುಗಳನ್ನು ಆಡುತ್ತಾರೆ. ಮಾಡಬಾರದ ಕೆಲಸಗಳನ್ನು ಮಾಡುತ್ತಾರೆ. ಕೋಪ ತಣ್ಣಗಾದ ಮೇಲೆ ತಾವೇ ಸ್ವತಃ ಪಶ್ಚಾತ್ತಾಪ ಪಡುತ್ತಾರೆ.

ಕೋಪಕ್ಕೆ ಗುರಿಯಾದ ರಾವಣ ತಾನೊಬ್ಬನೇ ಕೆಡುವುದಲ್ಲದೆ ಅನೇಕರ ಸಾವು-ನೋವುಗಳಿಗೆ ಕಾರಣನಾಗಿರುವ ವಿಚಾರ ನಮ್ಮ ಬದುಕಿಗೆ ದೊಡ್ಡ ಉದಾಹರಣೆಯಾಗಿದೆ. ಬಸವಣ್ಣನವರು ತಮ್ಮ ವಚನದಲ್ಲಿ ಹೀಗೆ ಹೇಳಿದ್ದಾರೆ:

**ತನುವಿನ ಕೋಪ ತನ್ನ ಹಿರಿತನದ ಕೇಡು,**
**ಮನದ ಕೋಪ ತನ್ನ ಅರಿವಿನ ಕೇಡು,**
**ಮನೆಯೊಳಗಣ ಕಿಚ್ಚು ಮನೆಯ ಸುಟ್ಟಲ್ಲದೆ**
**ನೆರೆಮನೆಯ ಸುಡುವುದೇ ಕೂಡಲಸಂಗಮದೇವಾ....**

ಅಂದರೆ ಮನೆಯಲ್ಲಿ ತಿಗಣೆಗಳ ಕಾಟ ವಿಪರೀತವಾಗಿದೆಯೆಂದು ಕೋಪದಿಂದ ಮನೆಗೆ ಬೆಂಕಿ ಹಚ್ಚಿದರೆ ತಿಗಣೆಗಳೊಂದಿಗೆ ಮನೆಯೂ ಸುಡುತ್ತದೆ. ನಮ್ಮ ಜನಪದರು ಆಗಾಗ ಹೇಳುತ್ತಿರುವಂತೆ, ಕೋಪದ ಕೈಯ್ಯಾಗ ಬುದ್ಧಿ ಕೊಡಬೇಡ, ಕೋಪ ಶೃಂಗಾರಕ್ಕೆ ಬರೋಲ್ಲ, ಕೋಪ-ತಾಪಗಳೆಲ್ಲ ಅಪಾಯಕ್ಕೆ ಮೂಲ ಎಂದು. ಆದ್ದರಿಂದ ತಾಳಿದವನು ಬಾಳಿಯಾನು ತಾಳದವನು ಹಾಳಾಗುವನು.

ಕೋಪ ವಿಪರೀತವಾದಾಗ ತಿಳುವಳಿಕೆಯ ಗುಣಮಟ್ಟ ಕಡಿಮೆಯಾಗುತ್ತದೆ. ಮತ್ತೊಬ್ಬರ ವ್ಯಕ್ತಿತ್ವ ವಿಚಾರ ಅರಿಯುವ ತಾಳ್ಮೆ ಇಲ್ಲವಾಗುತ್ತದೆ. ತಾಳ್ಮೆಯಿದ್ದ ಮನುಷ್ಯನಿಗೆ ಅರ್ಹತೆ, ಗೌರವ, ಮರ್ಯಾದೆ ತಾವಾಗಿಯೇ ಬರುತ್ತವೆ. ಕೋಪದಿಂದ ವರ್ತಿಸಿದರೆ ಅವನ ಸಹವಾಸವೇ ಬೇಡ ಅವನಿಗೆ ಸದಾ ಮೂಗಿನ ಮೇಲೆ ಕೋಪವಿರುತ್ತದೆಂದು ಜನರು ಮಾತಾಡಿಕೊಳ್ಳುತ್ತಾ ಅವನಿಂದ ದೂರವಾಗುವುದುಂಟು. ಪರ್ಶಿಯಾದ ಕವಿಯೊಬ್ಬನ ಮಾತು ಹೀಗಿದೆ : "ನೀನು ಜಗತ್ತಿಗೆ ಬರುವಾಗ ಅಳುತ್ತಾ ಬಂದಿ. ಆಗ ಜಗತ್ತೆಲ್ಲಾ ನಗುತ್ತಿತ್ತು. ನೀನು ಜಗತ್ತನ್ನು ಬಿಟ್ಟು ಹೋಗುವಾಗ ನಗುತ್ತಾ ಹೋಗು ಆಗ ಜಗತ್ತೆಲ್ಲಾ ಅಳುತ್ತಿರಲಿ." ಅಂದರೆ ಕೋಪದಿಂದ ವರ್ತಿಸಿ ಎಲ್ಲರಲ್ಲಿ ದುಃಖ ತರಿಸಿದರೆ ಮತ್ತೊಬ್ಬರ ಜೀವನ ಹಾಳು ಮಾಡಿದರೆ ಸತ್ತಾಗ ಯಾರೂ ನಮಗೆ ಅನುಕಂಪದ ಮಾತುಗಳನ್ನು ಆಡಲಾರರು. ಈ ಸಂದರ್ಭದಲ್ಲಿ ಜನಪದ ಗರತಿಯೊಬ್ಬಳ ತ್ರಿಪದಿ ನೆನಪಾಗುತ್ತದೆ.

* ಬಸವಕೃಪ, ಬಾಲಾಜಿ ಬಡಾವಣೆ, ಪಟೇಲ ಹೈಸ್ಕೂಲ್ ಹತ್ತಿರ ಬಳ್ಳಾರಿ ರಸ್ತೆ, ಹೊಸಪೇಟೆ-೫೮೩೨೦೧







**ಲೋಕದಾಗಿರುವಾಗ ಬೇಕಾಗಿ ಇರಬೇಕ**
**ಸಾಕಾಗಿ ಶಿವನ ಸದರೀಗೆ ಹೋಗ್ವಾಗ**
**ನಾಕು ಜನರಿರಬೇಕ ಕಳಿಸಾಕ.**

ನಮ್ಮ ಇಹದ ಬದುಕಿನಲ್ಲಿ ಸದಾ ಕೋಪ-ತಾಪಗಳಿಂದ ವರ್ತಿಸದೇ ತಾಳ್ಮೆ-ಸಮಾಧಾನದಿಂದ ಇದ್ದರೆ ಎಲ್ಲರೂ ನಮ್ಮನ್ನು ಪ್ರೀತಿಸುತ್ತಾರೆ. ಆಗ ನಮ್ಮ ಬದುಕು ಸುಂದರಮಯವಾಗುತ್ತದೆ.

ಮನುಷ್ಯ ಎಷ್ಟೇ ಒಳ್ಳೆಯ ಸಾಂಸ್ಕೃತಿಕ ಕೆಲಸ-ಕಾರ್ಯಗಳನ್ನು ಮತ್ತು ಸಮಾಜ ಸೇವೆ ಮಾಡಿದರೂ ಕೋಪವೊಂದು ಅವನಲ್ಲಿದ್ದುದಾದರೆ, ಆ ಎಲ್ಲಾ ಕೆಲಸಗಳೂ ಹೊಳೆಯಲ್ಲಿ ಹುಣಸೆ ಹಣ್ಣು ತೊಳೆದಂತೆ, ನೀರಿನಲ್ಲಿ ಹೋಮ ಮಾಡಿದಂತೆ ಎಲ್ಲವೂ ವ್ಯರ್ಥ. ಇತ್ತೀಚೆಗೆ ಜನರಲ್ಲಿ ತಾಳ್ಮೆಯ ಸ್ವಭಾವ ತುಂಬಾ ಕಡಿಮೆಯಾಗುತ್ತಿದೆ. ಎಲ್ಲಿ ನೋಡಿದರೆ ಅಲ್ಲಿ ಅವಸರ, ಅಪಾಯ, ಅಧಃಪತನ, ಅಪನಂಬಿಕೆಗಳೆಲ್ಲಾ ಕೋಪದ ಮೂಲಕ ಹೆಚ್ಚಾಗಿವೆ. ಕೆಲವರು ಹಣ, ಅಧಿಕಾರದ ಮದದಿಂದಲೋ ಅಥವಾ ವ್ಯಾಮೋಹದಿಂದಲೋ ಸುಧಾರಣೆ ಕಳೆದುಕೊಂಡು ಶೀಘ್ರ ಕೋಪಿಗಳಾಗುತ್ತಿದ್ದಾರೆ. ಇದರಿಂದ ಮಾತು ಮಾತಿಗೆ ಜಗಳ, ಅಸಭ್ಯವರ್ತನೆಗಳು ಉಂಟಾಗಿ ಸಮಾಜದಲ್ಲಿ ಶಾಂತಿ ಕದಡಲಾಗುತ್ತಿದೆ.

ಆದ್ದರಿಂದ ಮನುಷ್ಯರಾದ ನಾವು ಮೊದಲು ಉತ್ತಮ ಸಂಸ್ಕಾರ ಸಂಸ್ಕೃತಿಗಳನ್ನು ಕಲಿಯೋಣ. ಪಶುಗಳಂತೆ ಕಚ್ಚಾಡುವುದನ್ನು ಬಿಡೋಣ. ಸುಂದರ ಸಮಾಜ ನಿರ್ಮಿಸಲು ಬೇಕಾದ ಶಾಂತಿ-ಸಮಾಧಾನಗಳನ್ನು ಬೆಳೆಸಿಕೊಂಡು ಕೋಪದ ಸ್ವಭಾವವನ್ನು ಕೈಬಿಡೋಣ.

## ಶ್ರೀವಾಣಿ

ಕಾಯಕದಿಂದ ತನು ಶುಚಿಯಾಗುತ್ತದೆ. ಅನಗತ್ಯವಾಗಿ ಸಂಗ್ರಹವಾದ ನಂಜೆಲ್ಲವೂ ಬೆವರಿನ ರೂಪದಲ್ಲಿ ಹರಿದು ಹೋಗುತ್ತದೆ. ಬೊಜ್ಜು ಕರಗುತ್ತದೆ. ತನು ಸಪುರವಾಗುತ್ತದೆ. ಸುಂದರ ಸಿರಿಯಾಗುತ್ತದೆ. ಕಾಯಕದಿಂದ ಮನ ಶುದ್ಧವಾಗುತ್ತದೆ. ಲೋಭ ಪ್ರಲೋಭನೆಗಳು ದೂರವಾಗುತ್ತವೆ. ಭಾವ ಶಿವಮುಖವಾಗುತ್ತದೆ.

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ **'ಸಿದ್ಧಗಂಗಾ'** ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗುತ್ತದೆ ಎಂಬುದನ್ನು ತಮ್ಮ ಗಮನಕ್ಕೆ ತರುತ್ತಲೇ ಬರುತ್ತಿದ್ದೇವೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿ ಕೊಳ್ಳುವಿರೆಂದು ಭಾವಿಸಿದ್ದೇವೆ.

**ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.**

ದಯಮಾಡಿ ತಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತವನ್ನು ಸಿದ್ಧಗಂಗಾ **ಮಾಸಪತ್ರಿಕೆ** ಹೆಸರಿನಲ್ಲಿ **ನಗದು/ಚೆಕ್/ಡಿ.ಡಿ.** ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ (ಐಡಿ) ಸಂಖ್ಯೆ ನಮೂದಿಸಿ ದೂರವಾಣಿ/ಮೊಬೈಲ್ ನಂಬರ್‌ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ ಕೊಡುವುದರ ಮೂಲಕ **'ಸಿದ್ಧಗಂಗಾ'** ಮುನ್ನಡೆಗೆ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ. ವಿಳಾಸ ಬದಲಾವಣೆಯಾಗಿದ್ದರೆ ದಯವಿಟ್ಟು ಬದಲಾದ ವಿಳಾಸ ಹಾಗೂ ತಮ್ಮ ದೂರವಾಣಿ ಸಂಖ್ಯೆಯನ್ನು ತಮ್ಮ (LM) ಸಂಖ್ಯೆಯೊಂದಿಗೆ ಕಾರ್ಡಿನಲ್ಲಿ ಬರೆದು ಕಳುಹಿಸಿಕೊಟ್ಟರೆ ಪತ್ರಿಕೆ ತಮಗೆ ತಲುಪಲು ಅನುಕೂಲವಾಗುತ್ತದೆ. ವಾರ್ಷಿಕ ಚಂದಾದಾರರು ತಮ್ಮ ಸದಸ್ಯತ್ವದ ಅವಧಿ ಮುಗಿದಿದ್ದರೆ ನವೀಕರಿಸಿ ಕೊಳ್ಳಬೇಕೆಂದು ಕೋರುತ್ತೇವೆ.

ಪ್ರಕಾಶಕರು,
'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ, ತುಮಕೂರು ಜಿಲ್ಲೆ-೫೭೨ ೧೦೪.
ದೂರವಾಣಿ : ೦೮೧೬-೨೨೮೨೫೨೨

## ದಾನಿಗಳ ಪಟ್ಟಿ

ಶ್ರೀ ಸಿದ್ಧಗಂಗಾ ಮಠ, ತುಮಕೂರು

**ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳ ಪಟ್ಟಿ ತಾವು ನೀಡುವ ಹಣಕ್ಕೆ ಆದಾಯ ತೆರಿಗೆ ಇಲಾಖೆಯಿಂದ ೮೦ಜಿ ಅಡಿಯಲ್ಲಿ ಶೇ. ೫೦ರವರೆಗೆ ತೆರಿಗೆ ವಿನಾಯಿತಿ ಇರುತ್ತದೆ.**

| ಕ್ರ.ಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೨೧೫೬. | ಶ್ರೀ ಬಿ.ಎನ್. ಸಂಗಪ್ಪ<br>ವಿನಾಯಕನಗರ, ಗುಬ್ಬಿ. | ೧೦೦೦ |
| ೨೧೫೭. | ಶ್ರೀ ವೆಂಕಟೇಶಯ್ಯ<br>ತುಮಕೂರು | ೨೦೦೦ |
| ೨೧೫೮. | ಶ್ರೀ ಎಸ್.ಹೆಚ್. ಜಡಿಯಪ್ಪ<br>ಮೈದಾಳ | ೧೦೦೦ |
| ೨೧೫೯. | ಶ್ರೀ ವಿ.ಸಿ. ಪರಮಶಿವಯ್ಯ<br>ಬೆಂಗಳೂರು | ೨೦೦೦ |
| ೨೧೬೦. | ಶ್ರೀ ವೀರಭದ್ರಗೌಡ<br>ರಾಯಚೂರು | ೨೦೦೦ |
| ೨೧೬೧. | ಶ್ರೀ ಕಾಡಪ್ಪ<br>ಬೆಂಗಳೂರು | ೧೦೦೦ |
| ೨೧೬೨. | ಶ್ರೀ ಎಸ್. ರುದ್ರೇಶ್<br>ಬೆಂಗಳೂರು | ೨೦೦೨ |
| ೨೧೬೩. | ಶ್ರೀ ಪರಮೇಶ್ವರಪ್ಪ<br>ಬೆಂಗಳೂರು | ೨೦೦೦ |
| ೨೧೬೪. | ಶ್ರೀ ಮೈಲಾರಪ್ಪ<br>ಬೆಂಗಳೂರು | ೧೦೦೦ |
| ೨೧೬೫. | ಶ್ರೀ ರಾಜಶೇಖರಯ್ಯ<br>ತುಮಕೂರು | ೨೦೦೦ |
| ೨೧೬೬. | ಶ್ರೀ ಬಿ. ಸುಬೇದಾರ್<br>ಬೆಂಗಳೂರು | ೧೦೦೦ |
| ೨೧೬೭. | ಶ್ರೀ ಜಿ.ಎನ್. ಸಿದ್ಧಪ್ಪ<br>ಬೆಂಗಳೂರು | ೧೦೦೧ |
| ೨೧೬೮. | ಶ್ರೀ ಟಿ.ಜಿ. ಮಂಜುನಾಥ್<br>ಬೆಂಗಳೂರು | ೧೧,೦೦೦ |
| ೨೧೬೯. | ಶ್ರೀ ಎಸ್. ರೇಣುಕಯ್ಯ<br>ಮರೂರು | ೧೦೦೧ |
| ೨೧೭೦. | ಶ್ರೀ ಸಿಂಗಪ್ಪ ಸಿದ್ಧಪ್ಪ ಗಲಗಿ<br>ಇಟಗಿ | ೫೦೦ |
| ೨೧೭೧. | ಶ್ರೀ ಪ್ರಭಾಕರ<br>ಹೊಳೇನರಸೀಪುರ | ೧೦೦೦ |
| ೨೧೭೨. | ಶ್ರೀ ಸಿದ್ಧರಾಮೇಗೌಡರು<br>ಕಳಸಾಪುರ | ೫೦೦ |
| ೨೧೭೩. | ಶ್ರೀ ಪಿ. ಚನ್ನಪ್ಪ<br>ತುಮಕೂರು | ೧೦೦೦ |
| ೨೧೭೪. | ಶ್ರೀ ಎಂ.ಎನ್. ನಾಗರಾಜಯ್ಯ<br>ತುಮಕೂರು | ೨೦೦೦ |
| ೨೧೭೫. | ಶ್ರೀ ಕೆ.ಹೆಚ್. ನಾರಾಯಣರೆಡ್ಡಿ<br>ತುಮಕೂರು | ೨೦೦೦ |
| ೨೧೭೬. | ಶ್ರೀ ಶಿವರುದ್ರಯ್ಯ<br>ತುಮಕೂರು | ೧೦೦೧ |
| ೨೧೭೭. | ಶ್ರೀ ದಕ್ಷಿಣಾಮೂರ್ತಿ<br>ಬೆಂಗಳೂರು | ೨೦೦೧ |
| ೨೧೭೮. | ಶ್ರೀ ಎಂ. ತಿಮ್ಮಯ್ಯ<br>ಬೆಂಗಳೂರು | ೨೦೦೦ |
| ೨೧೭೯. | ಶ್ರೀ ಮಂಜುನಾಥ್ ಎನ್<br>ದೇವರಹಳ್ಳಿ | ೪೦೦೦ |
| ೨೧೮೦. | ಶ್ರೀ ಬಿ.ಪಿ. ಬಸವರಾಜು<br>ತುಮಕೂರು | ೧೦೦೦ |
| ೨೧೮೧. | ಶ್ರೀ ಎ.ಸಿ. ಚಂದ್ರಪ್ಪ<br>ತುಮಕೂರು | ೨೦೦೧ |
| ೨೧೮೨. | ಶ್ರೀ ಬಿ.ವಿ. ಸದಾನಂದ<br>ಬೆಂಗಳೂರು | ೨೦೦೦ |
| ೨೧೮೩. | ಶ್ರೀ ಮುತ್ತಮ್ಮೈಮಣ್ಣ<br>ಶಾಂತಿನಗರ | ೨೦೦೦ |
| ೨೧೮೪. | ಶ್ರೀಮತಿ ಚನ್ನಮ್ಮ ಚೌಡಪ್ಪನವರ ಸ್ಮರಣೆ<br>ಪುತ್ರ ಕೆ.ಸಿ. ಚಿಕ್ಕಣ್ಣ, ಕೋಳಾಲ | ೧೦,೦೦೨ |
| ೨೧೮೫. | ಶ್ರೀ ಕೆ.ಜಿ. ನಟರಾಜ<br>ಕಲ್ಯ | ೧೦೦೦ |
| ೨೧೮೬. | ಶ್ರೀ ಕೆ.ಎನ್. ಶಿವರುದ್ರಯ್ಯ<br>ಬೆಂಗಳೂರು | ೨೦೦೬ |
| ೨೧೮೭. | ಶ್ರೀ ಬಸವರಾಜು<br>ಬೆಂಗಳೂರು | ೫೦೦ |
| ೨೧೮೮. | ಶ್ರೀ ಎಂ. ವೀರಣ್ಣ<br>ಚಿಕ್ಕಬೆಳವಂಗಲ | ೧೦೦೦ |
| ೨೧೮೯. | ಶ್ರೀ ಕೆ.ಎಂ. ವಿರೂಪಾಕ್ಷಪ್ಪ<br>ಎಸ್. ಕಲ್ಲಹಳ್ಳಿ | ೧೦೦೦ |
| ೨೧೯೦. | ಶ್ರೀ ಶಿವಶಂಕರಯ್ಯ<br>ಬೆಂಗಳೂರು | ೧೦೦೧ |
| ೨೧೯೧. | ಶ್ರೀ ಗುರುವಯ್ಯ<br>ತುಮಕೂರು | ೫೦೦ |
| ೨೧೯೨. | ಶ್ರೀ ಎಂ.ಎಸ್. ಮರಿಬಸಯ್ಯ<br>ಹುಲ್ಲೇಕೆರೆ | ೫೦೦ |

(ಮುಂದುವರೆಯುತ್ತದೆ)

RNI No. 17139/69
"Siddaganga" Monthly - Postal Reg. No. L2/RNP/385/TMR/2018-20
Posted at RMS, Tumkur-572 102





To

LM 06570.
Sri A. Ramesh, Advocate,
No.462, 4th Main,
2nd Stage, Dolors Colony,
BANGALORE-560 074.



If undelivered please return to:
Editor
Siddaganga Monthly Magazine
Siddaganga Math
Tumkur-572 104

email.ID : geetanjaligraphics@gmail.com